CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೦೪ (ಫಾಲ್ಗುಣ ೦೭, ಶಕ ವರ್ಷ ೧೯೨೫) | ಸಂಚಿಕೆ ೦೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ:615/2001-02, ದಿನಾಂಕ:16ನೇ ಡಿಸೆಂಬರ್, 2003**

**ಆಲ್ದೂರು ಪೊಲೀಸ್ ಠಾಣೆ ಕ್ರೈಂ ಸಂ. 32/2002 ದಿನಾಂಕ:6ನೇ ಫೆಬ್ರವರಿ, 2002**

**ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪವಲಯ ಇವರ ಪ್ರ.ವ.ವ. ಸಂಖ್ಯೆ:57/2001-02 ದಿನಾಂಕ:18ನೇ ಫೆಬ್ರವರಿ, 2002**

**ಉಪಸ್ಥಿತರು**

ಕೆ. ಭೀಮಪ್ಪ

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಪಿರ್ಯಾದುದಾರರು** | **ವಿರುದ್ಧ** | **ಆಪಾದಿತರು** |
|---|---|---|
| ಆರಕ್ಷಕ ಉಪ ನಿರೀಕ್ಷಕರು<br>ಆಲ್ದೂರು ಪೊ. ಠಾಣೆ | | ಬಿ.ಎಂ. ಶಿವರಾಜ್ ಬಿನ್ ರಾಜೇಗೌಡ |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 06.02.2002 ರಂದು ಆರಕ್ಷಕ ಉಪ ನಿರೀಕ್ಷಕರು, ಆಲ್ದೂರು ಪೊಲೀಸ್ ಠಾಣೆ, ಇವರು ಲೈಲ್ಯಾಂಡ್ ಲಾರಿ ಸಂಖ್ಯೆ: ಎಂ.ಪಿ. 09. ಕೆ.ಎ. 7932 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 4788.000ಲೀ. ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಬಿ.ಎಂ. ಶಿವರಾಜ್ ಬಿನ್ ರಾಜೇಗೌಡ ಇವರು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕ್ರೈಂ.ಸಂ. 32/2002ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂ. 57/2001-02 ದಿನಾಂಕ:18.02.2002ರಲ್ಲಿ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಕುರಿತು ಮಧ್ಯಪ್ರದೇಶದ ಬಿಲಾಸ್‌ಪುರ್ ದಿನಾಂಕ: 26.03.2002ರಿಂದ ಇಂಧೋರ್ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ದಿನಾಂಕ:28.02.2002ರಿಂದ ಪತ್ರ ವ್ಯವಹಾರ ನಡೆಸುತ್ತಾ ಬಂದಿದ್ದು, ಇದುವರೆವಿಗೂ ಸದರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಯಾವುದೇ ಪ್ರಮಾಣವಾಗಲೀ ಅಥವಾ ಉತ್ತರವಾಗಲಿ ಬಂದಿರುವುದಿಲ್ಲ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ಮೌಲ್ಯ ದೃಢೀಕರಣ ಕೋರಿ ಪತ್ರ ಬಂದಿದ್ದು, ಉತ್ತರ ಬಂದಿರುವುದಿಲ್ಲ.

ವಶಪಡಿಸಿಕೊಂಡ ವಾಹನ ಮತ್ತು ಮದ್ಯಕ್ಕೆ ಸಂಬಂಧಿಸಿದ ಮಾಲೀಕರೆಂದು ಯಾರು ಪ್ರಾಧಿಕಾರದ ಮುಂದೆ ಬಂದು ಇದುವರೆವಿಗೂ ಹಕ್ಕು ಸಾಧಿಸಿರುವುದಿಲ್ಲ.

ಸದರಿ ಪ್ರಕರಣದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ವ್ಯವಹಾರದಲ್ಲಿ ಈಗಾಗಲೇ 1 ವರ್ಷ, 5 ತಿಂಗಳ ಸಮಯ ಕಳೆದಿರುತ್ತದೆ.

ವಶಪಡಿಸಿಕೊಂಡ 4788.000ಲೀ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿತ್ತು. ವಾಹನದ ಮುಟ್ಟುಗೋಲಿನ ನಡುವಳಿಗಳು ಇನ್ನು ತನಿಖಾ ಹಂತದಲ್ಲಿದ್ದು, ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಳ್ಳುವಲ್ಲಿ ಸಾಕಷ್ಟು ಕಾಲಾವಕಾಶ ಬೇಕಾಗಿರುವುದರಿಂದ ವಶಪಡಿಸಿಕೊಂಡ ವಾಹನವನ್ನು ಇಲಾಖೆ ವಶದಲ್ಲಿ ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರಿತ್ಯಗಳಿಗನುಗುಣವಾಗಿ ವಾಹನದ ಮೌಲ್ಯವು ಸಾಕಷ್ಟು ಪ್ರಮಾಣದಲ್ಲಿ ಇಳಿಮುಖಗೊಂಡು ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ, ಈ ಹಿನ್ನೆಲೆಯಲ್ಲಿ ಈ ತಕ್ಷಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜಿನಲ್ಲಿ ಮಾರಾಟ ಮಾಡಿ, ಸದರಿ ಹಣವನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಒಂದು ವೇಳೆ ವಾಹನದ ಮಾಲೀಕರು ದಾಖಲಾತಿಯೊಂದಿಗೆ ಪ್ರಾಧಿಕಾರದ ಮುಂದೆ ಹಾಜರಾದಲ್ಲಿ, ಹಾಗೂ ಅಬಕಾರಿ ಕಾನೂನಿನಡಿಯಲ್ಲಿ ತನ್ನ ಹೊಣೆಯನ್ನು ಸಮರ್ಪಕವಾಗಿ ನಿರ್ವಹಿಸಿದ ಬಗ್ಗೆ ಸ್ಪಷ್ಟಪಡಿಸಿದಲ್ಲಿ, ಸದರಿ ಹಣವನ್ನು ಆತನಿಗೆ ಹಿಂದಿರುಗಿಸುವುದು ಯೋಗ್ಯವೆಂಬ ವಿಚಾರದಿಂದ ಈ ತಕ್ಷಣ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಎ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಎಂ.ಪಿ.09 ಕೆ.ಎ. 7932 (ಲೈಲ್ಯಾಂಡ್ ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 16ನೇ ಡಿಸೆಂಬರ್ 2003ರಂದು ಬೆರಳಚ್ಚು ಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿಗಳು ಮತ್ತು
ಅಬ್ಕಾರಿ ಉಪ ಆಯುಕ್ತರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.133

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ:ಜೆಆರ್‌ಬಿ:ಡಿಸ್:6928:2003-04, ದಿನಾಂಕ:19ನೇ ಜನವರಿ, 2004**

**ವಾದಿ** — **ವಿರುದ್ಧ** — **ಪ್ರತಿವಾದಿಗಳು**

ಕಾರ್ಯದರ್ಶಿ,
ಅಶೋಕನಗರ ಕೋ-ಆಪರೇಟೀವ್
ಬ್ಯಾಂಕ್ ಲಿಮಿಟೆಡ್,
ನಂ.1345, 5ನೇ ಕ್ರಾಸ್, ಬಿಎಸ್‌ಕೆ 1ನೇ
ಹಂತ, 2ನೇ ಬ್ಲಾಕ್, ಅಶೋಕನಗರ,
ಬೆಂಗಳೂರು-560050.

1. ಶ್ರೀಮತಿ ಜಯಮ್ಮ
   ಕೋಂ. ಶಿವಣ್ಣ, 6ನೇ ಕ್ರಾಸ್, 12ನೇ ಮುಖ್ಯ ರಸ್ತೆ,
   ರಾಘವೇಂದ್ರ ಬ್ಲಾಕ್, ಶ್ರೀನಗರ, ಬೆಂಗಳೂರು-50.
2. ಶ್ರೀ ಎಂ.ಇ. ಈಶ್ವರ್,
   ನಂ.998, 10ನೇ ಮುಖ್ಯ ರಸ್ತೆ,
   ರಾಘವೇಂದ್ರ ಬ್ಲಾಕ್, ಶ್ರೀನಗರ,
   ಬೆಂಗಳೂರು-560050.
3. ಶ್ರೀ ನಾಗರಾಜು
   ನಂ.549:ಸಿ, 14ನೇ ಮುಖ್ಯರಸ್ತೆ, 1ನೇ ಬ್ಲಾಕ್, ಹನುಮಂತನಗರ,
   ಬಿಎಸ್‌ಕೆ 1ನೇ ಸ್ಟೇಜ್, ಬೆಂಗಳೂರು-560050.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 52,971ಗಳನ್ನು ದಿನಾಂಕ:01.01.2004ರಿಂದ ಶೇಕಡಾ 19.5 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ:ಜೆಆರ್‌ಬಿ:ಡಿಸ್:6928:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು: ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್:ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್:ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ.ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 52,971 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:09.02.2004ರ ಒಳಗಾಗಿ ಅಧಿಕೃತ ಚಲನ್:ರಶೀತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದ ಒಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ನಗರದ ಬನಶಂಕರಿ 3ನೇ ಹಂತದಲ್ಲಿರುವ ರಾಘವೇಂದ್ರ ಬ್ಲಾಕ್‌ನ 6ನೇ ಅಡ್ಡರಸ್ತೆಯಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ 30 ಅಡಿ, ಉತ್ತರದಿಂದ ದಕ್ಷಿಣಕ್ಕೆ 45 ಅಡಿ ಅಳತೆಯ ನಿವೇಶನ ಸಂಖ್ಯೆ: 20 (ಹೊಸ ಸಂಖ್ಯೆ), ಹಳೇ ಸಂಖ್ಯೆ: 20:7, ಮತ್ತು ಇದರಲ್ಲಿ ಕಟ್ಟಲಾಗಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಮನೆ ನಂ.19
ಪಶ್ಚಿಮಕ್ಕೆ : ಮನೆ ನಂ. 21
ಉತ್ತರಕ್ಕೆ : ಮನೆ ನಂ. 31
ದಕ್ಷಿಣಕ್ಕೆ : ರಸ್ತೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:19.01.2004ರಂದು ನೀಡಿರುತ್ತೇನೆ.

**ಬಸವೇಗೌಡ**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.140

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:57:ಮಪ್ರ:2004, ದಿನಾಂಕ:20ನೇ ಜನವರಿ, 2004**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ನಿಂಗಪ್ಪ ತಂದೆ ಚಂದ್ರಪ್ಪ ಕೇಸರಹಟ್ಟಿ ವಯಸ್ಸು:36 ಸಾ:ಚಿಕ್ಕಬೆಣಕಲ್, ಹಾಲಿವಸತಿ ಲಿಂಗರಾಜ್ ಕ್ಯಾಂಪ್ ತಾ:ಗಂಗಾವತಿ, ಜಿ:ಕೊಪ್ಪಳ. | ವಿರುದ್ಧ | 1. ದಾದಾಖಲಂದರ್ ತಂದೆ ಅಬ್ದುಲ್ ರಷೀದ್‌ಸೂಡಿ ವಯಸ್ಸು:24 ವರ್ಷ, ಲಾರಿಡ್ರೈವರ್ ಲಾರಿ ನಂ. ಕೆಎ-37:4465 ಚಾಲಕ, ಸಾ: ಖಾನ್‌ಸಾಬ್ ಚಾಳ, ಫಿರ್ದೋಷ ನಗರ, ಕೊಪ್ಪಳ.<br>2. ಮೆಹಬೂಬ್ ಪಾಷ ತಂದೆ ಅಬ್ದುಲ್ ರಷೀದ್ ಪಟೇಲ್, ಲಾರಿ ಮಾಲಿಕ, ಮೆ: ಕರ್ನಾಟಕ ಟ್ರಾನ್ಸ್‌ಪೋರ್ಟ್ ಕಂ. ಹೊಸಪೇಟೆ ರಸ್ತೆ, ಕೊಪ್ಪಳ. |

2. ಭೀಮೇಶ್ ತಂದೆ ನಿಂಗಪ್ಪ ಕೇಸರಹಟ್ಟಿ
ವಯಸ್ಸು:5 ವರ್ಷ ಸಾ:
ಚಿಕ್ಕಬೆಣಕಲ್, ಹಾಲಿವಸತಿ
ಲಿಂಗರಾಜ್ ಕ್ಯಾಂಪ್,
ತಾ:ಗಂಗಾವತಿ, ಜಿ:ಕೊಪ್ಪಳ.

3. ದಿ ರಾಯಲ್ ಸುಂದರಂ ಅಲೈಯನ್ಸ್
ಇನ್ಸೂರೆನ್ಸ್ ಕಂ.ಲಿ. ಇವರ ಪರವಾಗಿ ದಿ ಡಿವಿಜನಲ್ ಮ್ಯಾನೇಜರ್
ಮೆ: ಸುಂದರಂ ಫೈನಾನ್ಸ್ ಲಿ. ನಂ:46, ವೈಟ್ಸ್ ರೋಡ್
ಚೆನ್ನೈ-600014.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀಮತಿ ಚೆನ್ನಮ್ಮ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:07.02.2002 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಮೃತ: ಚೆನ್ನಮ್ಮನವರ, ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ನಿಂಗಪ್ಪ ತಂದೆ ಚಂದ್ರಪ್ಪ ಕೇಸರಹಟ್ಟಿ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.141

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:58:ಮಪ್ರ:2004, ದಿನಾಂಕ:20ನೇ ಜನವರಿ, 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ನಿಂಗಪ್ಪ ತಂದೆ ಈರಪ್ಪ
ಕೇಸರಹಟ್ಟಿ ವಯಸ್ಸು:40
ಸಾ:ಚಿಕ್ಕಬೆಣಕಲ್, ತಾ:ಗಂಗಾವತಿ,
2. ಲಕ್ಷ್ಮಮ್ಮ ಗಂಡ ನಿಂಗಪ್ಪ ಕೇಸರಹಟ್ಟಿ,
ಸಾ:ಚಿಕ್ಕಬೆಣಕಲ್, ಹಾಲಿ ವಸತಿ
ಲಿಂಗರಾಜ್ ಕ್ಯಾಂಪ್, ತಾ:ಗಂಗಾವತಿ
ಜಿ:ಕೊಪ್ಪಳ.

1. ದಾದಾಖಲಂದರ್ ತಂದೆ ಅಬ್ದುಲ್ ರಷೀದ್‌ಸೂಡಿ
ಸಾ: ಖಾನ್‌ಸಾಬ್ ಚಾಳ, ಫಿರ್ದೋಷ ನಗರ, ಕೊಪ್ಪಳ.
2. ಮೆಹಬೂಬ್ ಪಾಷ ತಂದೆ ಅಬ್ದುಲ್ ರಷೀದ್ ಪಟೇಲ್,
ಲಾರಿ ಮಾಲಿಕ, ಮೆ: ಕರ್ನಾಟಕ ಟ್ರಾನ್ಸ್‌ಪೋರ್ಟ್ ಕಂ.
ಹೊಸಪೇಟೆ ರಸ್ತೆ, ಕೊಪ್ಪಳ.
3. ದಿ ರಾಯಲ್ ಸುಂದರಂ ಅಲೈಯನ್ಸ್
ಇನ್ಸೂರೆನ್ಸ್ ಕಂ.ಲಿ. ಇವರ ಪರವಾಗಿ ದಿ ಡಿವಿಜನಲ್ ಮ್ಯಾನೇಜರ್
ಮೆ: ಸುಂದರಂ ಫೈನಾನ್ಸ್ ಲಿ. ನಂ:46, ವೈಟ್ಸ್ ರೋಡ್ ಚೆನ್ನೈ-600014.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀಮತಿ ಹುಲಿಗೆಮ್ಮ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:07.12.2002 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಮೃತ: ಹುಲಿಗೆಮ್ಮರವರ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀ ನಿಂಗಪ್ಪ ತಂದೆ ಈರಪ್ಪ ಕೇಸರಹಟ್ಟಿ, ಸಾ:ಚಿಕ್ಕಬೆಣಕಲ್, ತಾ:ಗಂಗಾವತಿ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.142

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:59:ಮಪ್ರ:2004, ದಿನಾಂಕ:20ನೇ ಜನವರಿ, 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ನಿಂಗಮ್ಮ ಗಂಡ ಬೆಟ್ಟಪ್ಪ ವಯಸ್ಸು:26 ಸಾ:ಚಿಕ್ಕಬೆಣಕಲ್ ಹಾಲಿವಸತಿ, ದೇವರಾಜ್ ಅರಸ್ ಕಾಲೋನಿ, ಕೊಪ್ಪಳ,
2. ಮಹಾದೇವಮ್ಮ ತಂದೆ ಬೆಟ್ಟಪ್ಪ ಸಾ:ಚಿಕ್ಕಬೆಣಕಲ್, ದೇವರಾಜ್ ಅರಸ್ ಕಾಲೋನಿ ಹಾಲಿವಸತಿ, ಕೊಪ್ಪಳ.
3. ಯಲ್ಲಮ್ಮ ಗಂಡ ಯಂಕಪ್ಪ ವಯಾ:47 ವರ್ಷ, ಸಾ:ಚಿಕ್ಕಬೆಣಕಲ್ ಹಾಲಿವಸತಿ ದೇವರಾಜ್ ಅರಸ್ ಕಾಲೋನಿ, ಕೊಪ್ಪಳ.

ಪ್ರತಿವಾದಿಗಳು:

1. ದಾದಾಖಲಂದರ್ ತಂದೆ ಅಬ್ದುಲ್ ರಷೀದ್‌ಸೂಡಿ ಲಾರಿಡ್ರೈವರ್, ಸಾ: ಖಾನ್‌ಸಾಬ್ ಚಾಳ, ಫಿರ್ದೋಷ ನಗರ, ಕೊಪ್ಪಳ.
2. ಮೆಹಬೂಬ್ ಪಾಷ ತಂದೆ ಅಬ್ದುಲ್ ರಷೀದ್ ಪಟೇಲ್, ಲಾರಿ ಮಾಲಿಕ, ಮೆ: ಕರ್ನಾಟಕ ಟ್ರಾನ್ಸ್‌ಪೋರ್ಟ್ ಕಂ. ಹೊಸಪೇಟೆ ರಸ್ತೆ, ಕೊಪ್ಪಳ.
3. ದಿ ರಾಯಲ್ ಸುಂದರಂ ಅಲೈಯನ್ಸ್ ಇನ್ಸೂರೆನ್ಸ್ ಕಂ.ಲಿ. ಇವರ ಪರವಾಗಿ ದಿ ಡಿವಿಜನಲ್ ಮ್ಯಾನೇಜರ್ ಮೆ: ಸುಂದರಂ ಫೈನಾನ್ಸ್ ಲಿ. ನಂ:46, ವೈಟ್ಸ್ ರೋಡ್ ಚೆನ್ನೈ-600014.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀಮತಿ ದುರುಗಮ್ಮ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:07.12.2002 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಮೃತ: ದುರುಗಮ್ಮರವರ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀಮತಿ ನಿಂಗಮ್ಮ ಗಂಡ ಬೆಟ್ಟಪ್ಪ: ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.143

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:61:2004, ದಿನಾಂಕ:20ನೇ ಜನವರಿ, 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಹೊನ್ನಪ್ಪ ತಂದೆ ಯಮನಪ್ಪ ಸಾ:ಚಿಕ್ಕಬೆಣಕಲ್ ಹಾಲಿವಸತಿ ದೇವರಾಜ್ ಅರಸ್ ಕಾಲೋನಿ, ಕೊಪ್ಪಳ.
2. ಲಿಂಗಮ್ಮ ಗಂಡ ಹೊನ್ನಪ್ಪ ಸಾ:ಚಿಕ್ಕಬೆಣಕಲ್ ಹಾಲಿವಸತಿ, ದೇವರಾಜ್ ಅರಸ್ ಕಾಲೋನಿ, ಕೊಪ್ಪಳ.

ಪ್ರತಿವಾದಿಗಳು:

1. ದಾದಾಖಲಂದರ್ ತಂದೆ ಅಬ್ದುಲ್ ರಷೀದ್‌ಸೂಡಿ ಸಾ: ಖಾನ್‌ಸಾಬ್ ಚಾಳ, ಫಿರ್ದೋಷ ನಗರ, ಕೊಪ್ಪಳ.
2. ಮೆಹಬೂಬ್ ಪಾಷ ತಂದೆ ಅಬ್ದುಲ್ ರಷೀದ್ ಪಟೇಲ್, ಲಾರಿ ಮಾಲಿಕ, ಮೆ: ಕರ್ನಾಟಕ ಟ್ರಾನ್ಸ್‌ಪೋರ್ಟ್ ಕಂ. ಹೊಸಪೇಟೆ ರಸ್ತೆ, ಕೊಪ್ಪಳ.
3. ದಿ ರಾಯಲ್ ಸುಂದರಂ ಅಲೈಯನ್ಸ್ ಇನ್ಸೂರೆನ್ಸ್ ಕಂ.ಲಿ. ಇವರ ಪರವಾಗಿ ದಿ ಡಿವಿಜನಲ್ ಮ್ಯಾನೇಜರ್ ಮೆ: ಸುಂದರಂ ಫೈನಾನ್ಸ್ ಲಿ. ನಂ:46, ವೈಟ್ಸ್ ರೋಡ್ ಚೆನ್ನೈ-600014.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ವೀರೇಶ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:07.12.2002 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಮೃತ ವೀರೇಶ್‌ರವರ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀ ಹೊನ್ನಪ್ಪ ತಂದೆ ಯಮನಪ್ಪ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.144

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:60:ಮಪ್ರ:2004, ದಿನಾಂಕ:20ನೇ ಜನವರಿ, 2004**

**ಅರ್ಜಿದಾರರು**

1. ಶ್ರೀಮತಿ ಕಸ್ತೂರಮ್ಮ ಗಂಡ ಭೋಜಪ್ಪ ಕಿಳ್ಳಿಕಿತ್ತರ, ವಯಾ:36, ಸಾ:ಹಿರೇಮಾದಿನಾಳ ಹಾಲಿವಸತಿ ದೇವರಾಜ್ ಕಾಲೋನಿ ಕೊಪ್ಪಳ.
2. ಈರಪ್ಪ ತಂದೆ ಭೋಜಪ್ಪ ಕಿಳ್ಳಿಕಿತ್ತರ ಸಾ:ಹಿರೇಮಾದಿನಾಳ ಹಾಲಿವಸತಿ, ದೇವರಾಜ್ ಕಾಲೋನಿ, ಕೊಪ್ಪಳ
3. ಶ್ರೀಮತಿ ಫಕೀರಮ್ಮ ಗಂಡ ಈರಪ್ಪ ಕಿಳ್ಳಿಕಿತ್ತರ ಸಾ:ಹಿರೇಮಾದಿನಾಳ ಹಾಲಿವಸತಿ ದೇವರಾಜ್ ಕಾಲೋನಿ ಕೊಪ್ಪಳ.

**ವಿರುದ್ಧ**

**ಪ್ರತಿವಾದಿಗಳು**

1. ದಾದಾಖಲಂದರ್ ತಂದೆ ಅಬ್ದುಲ್ ರಷೀದ್‌ಸೂಡಿ ಲಾರಿಡ್ರೈವರ್ ಲಾರಿ ನಂ.ಕೆಎ-37:5565ರ ಚಾಲಕ ಸಾ: ಖಾನ್‌ಸಾಬ್ ಚಾಳ, ಫಿರ್ದೋಷ ನಗರ, ಕೊಪ್ಪಳ.
2. ಮೆಹಬೂಬ್ ಪಾಷ ತಂದೆ ಅಬ್ದುಲ್ ರಷೀದ್ ಪಟೇಲ್, ಲಾರಿ ಮಾಲಿಕ, ಮೆ: ಕರ್ನಾಟಕ ಟ್ರಾನ್ಸ್‌ಪೋರ್ಟ್ ಕಂ. ಹೊಸಪೇಟೆ ರಸ್ತೆ, ಕೊಪ್ಪಳ.
3. ದಿ ರಾಯಲ್ ಸುಂದರಂ ಅಲೈಯನ್ಸ್ ಇನ್ಶೂರೆನ್ಸ್ ಕಂ.ಲಿ. ಇವರ ಪರವಾಗಿ ದಿ ಡಿವಿಜನಲ್ ಮ್ಯಾನೇಜರ್ ಮೆ: ಸುಂದರಂ ಫೈನಾನ್ಸ್ ಲಿ. ನಂ:46, ವೈಟ್ಸ್ ರೋಡ್ ಚೆನ್ನೈ-600014.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ಭೋಜಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ಉಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಮೃತ: ಭೋಜಪ್ಪರವರ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀಮತಿ ಕಸ್ತೂರಮ್ಮ ಗಂಡ ಭೋಜಪ್ಪ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.145

**ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು, ಇವರ ನಡವಳಿಗಳು**

**ವಿಷಯ:** ಬೆಳಗಾಂ (ಗುಪ್ತವಾರ್ತೆ) ವಿಭಾಗದ ಕಾಗವಾಡದ ಚಲಿಸುವ ಮಾರಾಟ ತೆರಿಗೆ ತನಿಖಾಠಾಣೆಯ ಕ್ಷೇತ್ರವ್ಯಾಪ್ತಿಯನ್ನು ಬದಲಾಯಿಸಿ, ಅಥಣಿ ಹಾಗೂ ರಾಯಭಾಗ್ ತಾಲ್ಲೂಕಿನಲ್ಲಿ ಚಲಿಸುವ ತನಿಖಾಠಾಣೆಯಾಗಿ ಕಾರ್ಯನಿರ್ವಹಿಸುವ ಬಗ್ಗೆ ಆದೇಶ ನೀಡುವ ಕುರಿತು.

**ಉಲ್ಲೇಖ:**
1. ಈ ಕಛೇರಿಯ ನಡವಳಿಗಳ ಸಂಖ್ಯೆ:ವಾತೆಅಃ(ಗು.ಸ.) ವಾತೆಅ1: ಸಿಆರ್. 97/02-03, ದಿನಾಂಕ:22.02.03
2. ಜಂಟಿ ಆಯುಕ್ತರು (ಗುವಾ) ಬೆಳಗಾಂ, ಇವರ ಪತ್ರ ಸಂಖ್ಯೆ: ಸಿಬ್ಬಂದಿ/ಎ/ಸಿಆರ್.2/85/02-03-04/3576, ದಿನಾಂಕ:06.12.03.

**ಪ್ರಸ್ತಾವನೆ:**

ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಇವರ ಉಲ್ಲೇಖ(1)ರ ನಡವಳಿಗಳ ಪ್ರಕಾರ ಕಾಗವಾಡದ ಸ್ಥಿರ ತನಿಖಾಠಾಣೆಯನ್ನು ಕಾಗವಾಡ ಕೇಂದ್ರಸ್ಥಾನವನ್ನಾಗಿರಿಸಿ, ಕೇಂದ್ರಸ್ಥಾನದಿಂದ 25 ಕಿ.ಮೀ. ದೂರಗಳ ಕಾರ್ಯವ್ಯಾಪ್ತಿಯಲ್ಲಿ ಚಲಿಸುವ ತನಿಖಾಠಾಣೆಯಾಗಿ ಕಾರ್ಯನಿರ್ವಹಿಸಲು ಆದೇಶ ಹೊರಡಿಸಲಾಗಿತ್ತು. ಕಾಗವಾಡದಿಂದ 25 ಕಿ.ಮೀ. ಹೊರಗಡೆ ಬಳಸುವ ದಾರಿಗಳು (ಹೊರ ರಾಜ್ಯದಿಂದ ಒಳಗಡೆ ಬರಲು) ಸಾಕಷ್ಟಿರುವುದರಿಂದ ಸದರೀ ದಾರಿಗಳಿಂದ ಶೇಕಡಾ 95%ರಷ್ಟು ಸರಕು ಸಾಗಾಣಿಕೆ ವಾಹನಗಳು ಬರುತ್ತಿರುವುದರಿಂದ ಪ್ರಸ್ತುತ ಕೊಟ್ಟ ಕಾರ್ಯವ್ಯಾಪ್ತಿಯಲ್ಲಿ ವಾಹನಗಳ ದಾಖಲೆಗಳು ಮತ್ತು ದಂಡ ಸಂಗ್ರಹಣೆ ಕಷ್ಟವಾಗಿದೆಯೆಂದು, ಕಾರಣ ಈಗಿರುವ ಆದೇಶವನ್ನು ಪರಿವರ್ತಿಸಿ ಅಥಣಿ ಹಾಗೂ ರಾಯಭಾಗ ತಾಲ್ಲೂಕುಗಳನ್ನು ಪೂರ್ತಿಯಾಗಿ ಕಾರ್ಯವ್ಯಾಪ್ತಿಗೆ ಅಳವಡಿಸಿದರೆ ಹೆಚ್ಚಿನ ದಾಖಲೆಗಳನ್ನು ಹಾಗೂ ದಂಡ ಸಂಗ್ರಹಣೆಗೆ ಅನುಕೂಲವಾಗಿದೆಯೆಂದು ಜಂಟಿ ಆಯುಕ್ತರು (ಗುಪ್ತವಾರ್ತೆ) ಬೆಳಗಾವಿ ಇವರು ಉಲ್ಲೇಖ(2)ರ ತಮ್ಮ ಪತ್ರದೊಂದಿಗೆ ಉದ್ದೇಶಿತ ನಕ್ಷೆಯನ್ನು ಲಗತ್ತಿಸಿ, ಆಯುಕ್ತರನ್ನು ಕೋರಿರುತ್ತಾರೆ.

ಜಂಟಿ ಆಯುಕ್ತರ ಅಭಿಪ್ರಾಯ ಹಾಗೂ ಉದ್ದೇಶಿತ ನಕ್ಷೆಯನ್ನು ಪರಿಶೀಲಿಸಿದಾಗ, ಪ್ರಸ್ತುತ ಕಾಗವಾಡದ ಚಲಿಸುವ ತನಿಖಾಠಾಣೆಯ 25 ಕಿ.ಮೀ. ಹೊರಗಡೆ ಬಳಸುವ ದಾರಿಗಳು ಸಾಕಷ್ಟಿರುವುದರಿಂದ ಹಾಗೂ ಈ ದಾರಿಗಳಲ್ಲಿ ಶೇಕಡಾ 95% ಸರಕು ವಾಹನಗಳು ಬರುತ್ತಿರುವುದರಿಂದ ರಾಜ್ಯದ ಬೊಕ್ಕಸಕ್ಕೆ ತೆರಿಗೆ ಕೈತಪ್ಪಿ ಹೋಗುವ ಸಂಭವ ಕಂಡು ಬಂದಿರುತ್ತದೆ. ರಾಜ್ಯದ ರಾಜಸ್ವ ಹಿತದೃಷ್ಟಿಯಿಂದ ಜಂಟಿ ಆಯುಕ್ತರ ಅಭಿಪ್ರಾಯವನ್ನು ಪರಿಗಣಿಸುವುದು ಸಮಂಜಸವೆನಿಸಿದ್ದರಿಂದ ಕೆಳಕಂಡಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ವಾತೆಆಅ(ಗು ಮತ್ತು ಸ) ವಾತೆಅ-1/ ಸಿಆರ್.9753/02-03, ದಿನಾಂಕ:08ನೇ ಜನವರಿ, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ಪ್ರಸ್ತುತ ಬೆಳಗಾಂ (ಗುಪ್ತವಾರ್ತೆ) ವಿಭಾಗದ ಕಾಗವಾಡದ ಚಲಿಸುವ ತನಿಖಾಠಾಣೆಯ ಕ್ಷೇತ್ರವ್ಯಾಪ್ತಿಯನ್ನು ಬದಲಾಯಿಸಿ, ಅಥಣಿ ಹಾಗೂ ರಾಯಭಾಗ್ ತಾಲ್ಲೂಕುಗಳಲ್ಲಿ ಚಲಿಸುವ ತನಿಖಾಠಾಣೆಯಾಗಿ ಕಾರ್ಯ ನಿರ್ವಹಿಸಲು ಕ.ಮಾ.ತೆ. ಕಾಯ್ದೆ 1957ರ ಕಲಂ 28ಎ ಉಪ ಪ್ರಕರಣ 1ರ ಅನ್ವಯ ಪ್ರಸ್ತುತ ಅಧಿಕಾರವನ್ನು ಉಪಯೋಗಿಸಿ, ಅಶೋಕ್ ಕುಮಾರ್. ಚ. ಮನೋಲಿ, ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಆದ ನಾನು, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಗುಪ್ತವಾರ್ತೆ) ಬೆಳಗಾಂ, ಇವರ ಕಾರ್ಯವ್ಯಾಪ್ತಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಕಾಗವಾಡ ಚಲಿಸುವ ತನಿಖಾಠಾಣೆಯ ಕ್ಷೇತ್ರವ್ಯಾಪ್ತಿಯನ್ನು ಬದಲಾಯಿಸಿ, ಅಥಣಿ ಹಾಗೂ ರಾಯ್‌ಬಾಗ್‌ನಲ್ಲಿ ಸಂಚಾರಿ ತನಿಖಾಠಾಣೆಯಾಗಿ ಕಾರ್ಯನಿರ್ವಹಿಸುವಂತೆ ಆದೇಶ ಹೊರಡಿಸುತ್ತೇನೆ.

ವಾಣಿಜ್ಯ ತೆರಿಗೆಗಳ ಆಯುಕ್ತರು,
ಕರ್ನಾಟಕ, ಬೆಂಗಳೂರು.

ಪಿ.ಆರ್.146

## ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು

(ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಸೆಕ್ಷನ್ 3 (ಬಿ) (1) ಮತ್ತು 2 ರ ಪ್ರಕಾರ ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ನಿಯಮ (3) ರ ಅಡಿಯಲ್ಲಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಗೆ ಸಂಬಂಧಪಟ್ಟ ಕ್ರಿಯೆ ಹಾಗೂ ಕರ್ತವ್ಯಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಿದೆ)

**ಅಧಿಸೂಚನೆ ಸಂಖ್ಯೆ: ಸೈಕಪುಇ/ಸಿಬ್ಬಂದಿ/ಮಾಹಅ/2003 ದಿನಾಂಕ: 21 ಆಗಸ್ಟ್ 2003**

ಅಧಿಸೂಚನೆ ಸಂಖ್ಯೆ: ಸೈಕಪುಇ/ಸಿಬ್ಬಂದಿ/ಮಾಹ/2000/2002 ದಿನಾಂಕ 27–9–2002 ನ್ನು ರದ್ದು ಪಡಿಸಿ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ರ ಪ್ರಕಾರ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಸಾರ್ವಜನಿಕ, ಸಕ್ಷಮ ಮತ್ತು ಅಪೀಲು ಪ್ರಾಧಿಕಾರಗಳು ಈ ಕೆಳಗಿನಂತಿವೆ:–

**ಸಾರ್ವಜನಿಕ ಪ್ರಾಧಿಕಾರ**

ಜಂಟಿ ನಿರ್ದೇಶಕರು, ಬೆಂಗಳೂರು (ನಗರ)
ಜಂಟಿ ನಿರ್ದೇಶಕರು, ಬೆಳಗಾವಿ
ಜಂಟಿ ನಿರ್ದೇಶಕರು, ವಿಜಾಪೂರ
ಜಂಟಿ ನಿರ್ದೇಶಕರು, ಮಡಿಕೇರಿ
ಉಪ ನಿರ್ದೇಶಕರು, ಗುಲಬರ್ಗಾ
ಉಪ ನಿರ್ದೇಶಕರು ಧಾರವಾಡ
ಉಪ ನಿರ್ದೇಶಕರು ಕಾರವಾರ
ಉಪ ನಿರ್ದೇಶಕರು ಶಿವಮೊಗ್ಗ
ಉಪ ನಿರ್ದೇಶಕರು ಮಂಗಳೂರು
ಉಪ ನಿರ್ದೇಶಕರು ಮೈಸೂರು
ಉಪ ನಿರ್ದೇಶಕರು ಬೆಂಗಳೂರು (ಗ್ರಾಮಾಂತರ)

**ಸಕ್ಷಮ ಪ್ರಾಧಿಕಾರ**

ಜಂಟಿ ನಿರ್ದೇಶಕರು, ಬೆಂಗಳೂರು (ನಗರ)
ಉಪ ನಿರ್ದೇಶಕರು (ಕೇಂದ್ರ ಸ್ಥಾನ)

**ಅಪೀಲು ಪ್ರಾಧಿಕಾರ**

ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ

ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000 ರ ಸೆಕ್ಷನ್ 3 (ಬಿ) (1) (2) ನಿಯಮ 3 ರ ಅಡಿ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆಯ ಕ್ರಿಯೆ ಮತ್ತು ಕರ್ತವ್ಯಗಳನ್ನು ಈ ಕೆಳಕಂಡಂತೆ ಪ್ರಕಟಿಸಿದೆ:-

**ನಿರ್ದೇಶಕರ ಕರ್ತವ್ಯಗಳು:**

ನಿರ್ದೇಶನಾಲಯದ ಯಶಸ್ವಿ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿದ್ದು ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಹಾಗೂ ಸೇವಾ ನಿರತ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧಿಸಿದ ವಿಷಯಗಳಿಗೆ ಇವರು ರಾಜ್ಯ ಸರ್ಕಾರದ ಮತ್ತು ಪುನರ್ವಸತಿ ಮಹಾನಿರ್ದೇಶಕರ ಪ್ರತಿನಿಧಿಗಳಾಗಿರುವರು. ಈ ಪಾತ್ರವನ್ನು ನಿಭಾಯಿಸಲು ಅವರಿಗೆ ಈ ಕೆಳಗಿನ ಜವಾಬ್ದಾರಿಗಳನ್ನು ವಹಿಸಲಾಗಿದೆ:-

1. ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಹಾಗೂ ಸೇವಾನಿರತ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿ ಸಂಬಂಧದಲ್ಲಿ ಸರ್ಕಾರದ ವಿವಿಧ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರುಗಳು, ಪುನರ್ವಸತಿ ಮಹಾನಿರ್ದೇಶಕರು ಮತ್ತು ಮಿಲಿಟರಿ ಯುನಿಟ್‌ಗಳೊಂದಿಗೆ ನಿಕಟ ಸಂಪರ್ಕ ಏರ್ಪಡಿಸಿಕೊಳ್ಳುವುದು. ಇದಲ್ಲದೆ ಮಾಜಿ ಸೈನಿಕರಿಗೆ ಉದ್ಯೋಗ ಮತ್ತು ಸ್ವಯಂ ಉದ್ಯೋಗ ಕಲ್ಪಿಸುವ ದೃಷ್ಠಿಯಿಂದ ಸಾರ್ವಜನಿಕ ಉದ್ಯಮಗಳು, ಹಣಕಾಸು ಸಂಸ್ಥೆಗಳು ಮತ್ತು ಪ್ರತಿಷ್ಠಿತ ಉದ್ಯೋಗಪತಿಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಮಾಜಿ ಸೈನಿಕರ ಪುನರ್ವಸತಿ ಸಾಧಿಸುವುದು.
2. ಮಾಜಿ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧ ಕೇಂದ್ರ ಸರ್ಕಾರ ಹೊರಡಿಸಿರುವ ಹಲವಾರು ನಿಯಮ/ಆದೇಶಗಳನ್ನು ರಾಜ್ಯ ಸರ್ಕಾರದಿಂದ ಸಮರ್ಪಕ ಅನುಷ್ಠಾನದ ಜವಾಬ್ದಾರಿ. ಈ ನಿಯಮಗಳಿಗೆ ಸಂದರ್ಭಾನುಸಾರ ತಿದ್ದುಪಡಿಯ ಅವಶ್ಯಕತೆ ಇದ್ದಲ್ಲಿ ಅದನ್ನು ಪುನರ್ ವಿಮರ್ಷೆಗಾಗಿ ಪುನರ್ವಸತಿ ಮಹಾನಿರ್ದೇಶಕರು, ಕೇಂದ್ರಿಯ ಸೈನಿಕ ಮಂಡಳಿ ಮತ್ತು ರಾಜ್ಯ ಸರ್ಕಾರದ ಗಮನಕ್ಕೆ ತರುವುದು.
3. ರಾಜ್ಯದ ಸೈನಿಕ ಮಂಡಳಿಗಳ ಕೆಲಸಗಳಲ್ಲಿ ಸಮನ್ವಯತೆ ಹಾಗೂ ಪ್ರಕರಣದ ಆದ್ಯತೆಯ ಮೇರೆಗೆ ಸೂಕ್ತ ಕ್ರಮ ಕೈಕೊಳ್ಳಲು ನಿರ್ದೇಶನ ನೀಡುವುದು.
4. ನಿಯತಕಾಲಿಕವಾಗಿ ವಿಚಾರ ಸಂಕೀರ್ಣಗಳು ಮತ್ತು ಸಮ್ಮೇಳನಗಳನ್ನು ಏರ್ಪಡಿಸಿ ಸಾರ್ವಜನಿಕರಲ್ಲಿ ರಕ್ಷಣಾ ಪಡೆಗಳ ಬಗ್ಗೆ ಅರಿವು ಮೂಡಿಸುವುದು. ಮಾಜಿ ಸೈನಿಕರ ಉದ್ಯೋಗ ಮೀಸಲಾತಿ ಬಗ್ಗೆ ಸಾರ್ವಜನಿಕ ಉದ್ಯಮಗಳು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಹ ವಿಚಾರ ಸಂಕೀರ್ಣಗಳನ್ನು ಏರ್ಪಡಿಸಿ ಅರಿವು ಮೂಡಿಸುವುದು. ಇದಲ್ಲದೆ ಮಾಜಿ ಸೈನಿಕರ ಪುನರ್ವಸತಿಯು ಒಂದು ಸಾಮಾಜಿಕ ಜವಾಬ್ದಾರಿ ಎಂದು ಪ್ರಮುಖ ಖಾಸಗಿ ಉದ್ಯಮಗಳು, ಉದ್ಯೋಗಪತಿಗಳು, ಉತ್ಪಾದನಾ ಹಾಗೂ ಇತರ ಸಂಘ ಸಂಸ್ಥೆಗಳಲ್ಲಿ ಅರಿವು ಮೂಡಿಸುವುದು.
5. ಕರ್ನಾಟಕ ಹಣಕಾಸು ಸಂಸ್ಥೆ, ಬ್ಯಾಂಕುಗಳು ಮತ್ತು ಇತರ ಖಾಸಗಿ ತರಬೇತಿ ಸಂಸ್ಥೆಗಳ ಸಹಯೋಗದಿಂದ ಮಾಜಿ ಸೈನಿಕರಿಗೆ ವೃತ್ತಿಪರ ತರಭೇತಿ ಶಿಬಿರಗಳನ್ನು ಏರ್ಪಡಿಸುವುದು.
6. ಕೇಂದ್ರ ಸರ್ಕಾರ, ಪುನರ್ವಸತಿ ಮಹಾ ನಿರ್ದೇಶಕರು ಮತ್ತು ರಾಜ್ಯ ಸರ್ಕಾರಗಳು ಮಾಜಿ ಸೈನಿಕರ ಕಲ್ಯಾಣ ಮತ್ತು ಪುನರ್ವಸತಿಗೆ ಸಂಬಂಧಿಸಿದ ಕಾರ್ಯ ಯೋಜನೆಗಳ ಬಗ್ಗೆ ವ್ಯಾಪಕ ಪ್ರಚಾರ ಮತ್ತು ಅನುಷ್ಠಾನ. ಸ್ವಯಂ ಉದ್ಯೋಗದ (ಸೆಂಫೆಕ್ಸ್‌ದಂತಹ ಕಾರ್ಯ ಯೋಜನೆಗಳ) ಲಾಭವನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ಪಡೆದುಕೊಳ್ಳುವ ನಿಟ್ಟಿನಲ್ಲಿ ಲಭ್ಯವಿರುವ ಎಲ್ಲ ಕ್ರಮಗಳನ್ನು ಜರುಗಿಸುವುದು.

ಮೇಲಿನವುಗಳಲ್ಲದೆ ಇಲಾಖಾ ಮುಖ್ಯಸ್ಥರಿಗೆ ದತ್ತವಾದ ಅಧಿಕಾರದೊಂದಿಗೆ ಈ ಕೆಳಗಿನ ಕರ್ತವ್ಯಗಳನ್ನು ಸಹ ನಿಭಾಯಿಸುವುದು:-

1. ಪದನಿಮಿತ್ತ ಕರ್ನಾಟಕ ರಾಜ್ಯ ಸೈನಿಕ ಮಂಡಳಿಯ ಕಾರ್ಯದರ್ಶಿಯಾಗಿ ಮಂಡಳಿಯ ನಿಯಮಗಳ ಪ್ರಕಾರ ಸಭೆಯನ್ನು ಏರ್ಪಡಿಸುವುದು.
2. ರಾಜ್ಯ ಸರ್ಕಾರದ ಕಲ್ಯಾಣ ನಿಧಿ ನಿಯಮಗಳ ಪ್ರಕಾರ ಕರ್ನಾಟಕ ರಾಜ್ಯ ಮಾಜಿ ಸೈನಿಕರ ಕಲ್ಯಾಣ ನಿಧಿಯಿಂದ ಜಾರಿಗೊಳಿಸಲಾಗಿರುವ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವುದು ಮತ್ತು ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
3. ಪದನಿಮಿತ್ತ ವಿಶೇಷ ನಿಧಿಯ ಕಾರ್ಯದರ್ಶಿಯಾಗಿ ವಿಶೇಷ ನಿಧಿಯಿಂದ ಜಾರಿಗೊಳಿಸಲಾಗಿರುವ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದು ಮತ್ತು ಸಭೆ ಏರ್ಪಡಿಸುವುದು ಹಾಗೂ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
4. ಪದನಿಮಿತ್ತ ರಾಜ್ಯಪಾಲರ ರಕ್ಷಣಾ ನಿಧಿಯ ಕಾರ್ಯದರ್ಶಿಯಾಗಿ ರಾಜ್ಯಪಾಲರ ರಕ್ಷಣಾ ನಿಧಿಯ ಸದ್ಬಳಕೆ ಮತ್ತು ಸಭೆ ಏರ್ಪಡಿಸುವುದು ಹಾಗೂ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿರುವರು.
5. ಪದನಿಮಿತ್ತ ಸಶಸ್ತ್ರ ಪಡೆಗಳ ಧ್ವಜ ದಿನಾಚರಣೆ ಸ್ಥಾಯಿ ಸಲಹಾ ಸಮಿತಿ ಸಭೆಯ ಕಾರ್ಯದರ್ಶಿಯಾಗಿ ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು. ಕೇಂದ್ರಿಯ ಸೈನಿಕ ಮಂಡಳಿ, ನವದೆಹಲಿ ಮತ್ತು ಸಮಿತಿಯ ಮಾರ್ಗದರ್ಶಿಗಳನುಸಾರ ಧ್ವಜ ನಿಧಿ ಸಂಗ್ರಹಣೆಯನ್ನು ಹೆಚ್ಚಿಸಲು ಕ್ರಮ ಕೈಕೊಳ್ಳುವುದು. ಇದಲ್ಲದೆ ಅದರ ಲೆಕ್ಕದ ನಿರ್ವಹಣೆಗೆ ಜವಾಬ್ದಾರರಾಗಿದ್ದಾರೆ.
6. ಅಂಗವಿಕಲ ಮಾಜಿ ಸೈನಿಕರು, ವಿಶಿಷ್ಟ ವೃತ್ತಿನಿರತ ಯೋಧರು ಅಂದರೆ ಕಮಾಂಡೋ, ಬಾಂಬ್ ಪರಿಣಿತರು ಶ್ವಾನ ತರಬೇತಿದಾರರು, ಭಾರಿ ವಾಹನ ಚಾಲಕರು ಮತ್ತು ವಿಶೇಷ ಸಾಧನ ಸಾಮಗ್ರಿ ನಿರ್ವಾಹಕರುಗಳ ಹೆಸರುಗಳನ್ನು ಉದ್ಯೋಗಕ್ಕಾಗಿ ನೋಂದಾಯಿಸುವುದು ಮತ್ತು ಆದ್ಯತೆ ಮೇರೆಗೆ ಪುರಸ್ಕರಿಸುವುದು.

7. ಯಾವುದೇ ಒಂದು ಜಿಲ್ಲಾ ಕಾರ್ಯಾಲಯದಲ್ಲಿ ನಿರ್ದಿಷ್ಟ ಪ್ರವರ್ಗದ ಮಾಜಿ ಸೈನಿಕರು ಲಭ್ಯವಿಲ್ಲದಿದ್ದಲ್ಲಿ ಅಂತಹ ಬೇಡಿಕೆಗಳನ್ನು ಪೂರೈಸಲು ರಾಜ್ಯದ ಎಲ್ಲಾ ಜಂಟಿ ಮತ್ತು ಉಪ ನಿರ್ದೇಶಕರಿಗೆ ಸುತ್ತೋಲೆ ನೀಡುವುದು. ಇದರಿಂದ ಮಾಜಿ ಸೈನಿಕರಿಗೆ ಉದ್ಯೋಗವಕಾಶ ಒದಗಿಸಿ ಸಂಪನ್ಮೂಲವನ್ನು ಗರಿಷ್ಠವಾಗಿ ಅನುಷ್ಠಾನಗೊಳಿಸುವುದು.
8. ಮಾಜಿ ಸೈನಿಕರ ಲಭ್ಯತೆ ಇಲ್ಲದ ಪ್ರಮಾಣ ಪತ್ರವನ್ನು ನೀಡುವ ಪ್ರಾಧಿಕಾರವನ್ನು ಕೇವಲ ನಿರ್ದೇಶನಾಲಯದಿಂದ ನೀಡುವ ಜವಾಬ್ದಾರಿ.

**ಉಪ ನಿರ್ದೇಶಕರು (ಕೇಂದ್ರ ಸ್ಥಾನ) ಇವರ ಕರ್ತವ್ಯಗಳು**

1. ನಿರ್ದೇಶಕರಿಗೆ ಸೂಕ್ತ ಸಲಹೆ ನೀಡುವುದು ಹಾಗೂ ನಿರ್ದೇಶನಾಲಯದ ಕೆಲಸ ಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವುದು ಮತ್ತು ನಿರ್ದೇಶಕರಿಂದ ಸೂಚಿತವಾದ ಕರ್ತವ್ಯಗಳನ್ನು ನಿರ್ವಹಿಸುವುದು.
2. ನಿರ್ದೇಶಕರು ಕೇಂದ್ರ ಸ್ಥಾನದಿಂದ ದೂರವಿರುವ ಸಂದರ್ಭಗಳಲ್ಲಿ ನಿರ್ದೇಶನಾಲಯದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ನಿರ್ದೇಶಕರು ವಾಪಸಾದ ನಂತರ ನಿರ್ದೇಶನಾಲಯದ ಪ್ರಮುಖ ಆಗು ಹೋಗುಗಳ ಬಗ್ಗೆ ವರದಿ ಸಲ್ಲಿಸುವುದು.
3. ನಿರ್ದೇಶನಾಲಯದ ಸಿಬ್ಬಂದಿ ವರ್ಗದವರ ಮೇಲ್ವಿಚಾರಣೆ ಮತ್ತು ಕಾಗದ ಪತ್ರಗಳನ್ನು ನಿರ್ದೇಶಕರಿಗೆ ಮಂಡಿಸುವ ಮುನ್ನ ಪರಿಶೀಲಿಸುವುದು.
4. ನಿರ್ದೇಶನಾಲಯದ ವರ್ಗೀಕೃತ ಪತ್ರ ವ್ಯವಹಾರವನ್ನು ಖುದ್ದಾಗಿ ನಿರ್ವಹಿಸುವುದು.
5. ಬಹಳ ದಿನಗಳಿಂದ ವಿಲೇ ಆಗದ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಗೊಳಿಸಲು ವೈಯಕ್ತಿಕ ಗಮನ ಹರಿಸಿ ಎಲ್ಲಾ ವಿಭಾಗಗಳಿಂದ ವರದಿಗಳನ್ನು ಪರಿಶೀಲಿಸುವುದು.
6. ನಿರ್ದೇಶಕರ ಪೂರ್ವಾನ್ಮತಿ ಪಡೆದು ಸಾಮಾನ್ಯ ಪತ್ರ ವ್ಯವಹಾರವನ್ನು ನಿರ್ದೇಶಕರ ಪರವಾಗಿ ಜರುಗಿಸುವುದು.
7. ಕಾರ್ಯಾಲಯಕ್ಕೆ ಅವಶ್ಯವಿರುವ ಪಿಠೋಪಕರಣಗಳನ್ನು, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಕಛೇರಿ ವೆಚ್ಚದಿಂದ ಖರೀದಿಸಲು ನಿರ್ದೇಶಕರಿಗೆ ಸೂಕ್ತ ಪ್ರಸ್ತಾವನೆಯನ್ನು ಮಂಡಿಸುವುದು.
8. ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳ ಪ್ರಶ್ನೆಗಳಿಗೆ ತ್ವರಿತವಾಗಿ ಸಮಂಜಸ ಉತ್ತರವನ್ನು ನೀಡುವ ಬಗ್ಗೆ ಮೇಲ್ವಿಚಾರಣೆ.
9. ನಿರ್ದೇಶನಾಲಯದ ವರ್ಗ 'ಬಿ' ಮತ್ತು 'ಸಿ' ಸಿಬ್ಬಂದಿಗಳ ವಾರ್ಷಿಕ ಕಾರ್ಯ ನಿರ್ವಹಣಾ ವರದಿ ಹಾಗೂ ರಜೆ, ವೇತನ ಮತ್ತು ಭತ್ಯೆ ಇತ್ಯಾದಿ ಹಾಗೂ ಸ್ಥಳೀಯ ಆಡಳಿತ ನಿರ್ವಹಣೆ.

**ಜಂಟಿ ಮತ್ತು ಉಪ ನಿರ್ದೇಶಕರುಗಳ ಕರ್ತವ್ಯಗಳು:**

ಜಿಲ್ಲಾ ಮಟ್ಟದ ಕಾರ್ಯಾಲಯ ಹಾಗೂ ಅಲ್ಲಿರುವ ಇತರ ಸಂಸ್ಥೆಗಳ ಸುಗಮ ಕಾರ್ಯನಿರ್ವಹಣೆಗೆ ಇವರು ಜವಾಬ್ದಾರರು. ಇವರು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಸೈನಿಕ ಮಂಡಳಿಯ ಪದನಿಮಿತ್ತ ಕಾರ್ಯದರ್ಶಿಗಳಾಗಿರುತ್ತಾರೆ. ಮಾಜಿ ಸೈನಿಕರ ಉದ್ಯೋಗ, ಸ್ವಯಂ ಉದ್ಯೋಗ ಮತ್ತು ಸೇವಾನಿರತ ಯೋಧರ ಕಲ್ಯಾಣ ಯೋಜನೆಗಳ ಅನುಷ್ಠಾನ ಇವು ಇವರ ಪ್ರಮುಖ ಜವಾಬ್ದಾರಿಗಳಾಗಿರುತ್ತವೆ. ಉಳಿದಂತೆ:–

1. ಕಾರ್ಯಾಲಯದ ಕರ್ತವ್ಯಗಳ ವಿಭಜನೆ ಮತ್ತು ಸಿಬ್ಬಂದಿ ವರ್ಗಕ್ಕೆ ಸಮರ್ಪಕ ಕಾರ್ಯ ವಿತರಣೆ ಹಾಗೂ ನಿರ್ದೇಶನಾಲಯದ ಸೂಚನೆಗಳ ಯಶಸ್ವಿ ಅನುಷ್ಠಾನ.
2. ಕಾಲ ಕಾಲಕ್ಕೆ ಸಿಬ್ಬಂದಿ ವರ್ಗದವರ ಕಾರ್ಯಕ್ಷಮತೆಯನ್ನು ಪರಾಮರ್ಶಿಸಿ ಅವರಿಗೆ ಕರ್ತವ್ಯ ನಿರ್ವಹಣೆಯಲ್ಲಿ ಮಾರ್ಗದರ್ಶನ ನೀಡುವುದು.
3. ಕಾರ್ಯಾಲಯದಿಂದ ಮಾಹಿತಿ ಬಯಸುವ ಪತ್ರ ವ್ಯವಹಾರಗಳಿಗೆ ತ್ವರಿತವಾಗಿ ಸ್ಪಂದಿಸುವುದು. ಇದಕ್ಕಾಗಿ ಗ್ರಂಥಾಲಯ ನಿರ್ವಹಣೆ ಮತ್ತು ಸೂಚನಾ ಫಲಕಗಳಲ್ಲಿ ಉಪಯುಕ್ತ ಮಾಹಿತಿಯನ್ನು ಸಂದರ್ಶಕರ ಉಪಯೋಗಕ್ಕಾಗಿ ಬಿತ್ತರಿಸುವುದು.
4. ಕಾರ್ಯಾಲಯದ ವರ್ಗೀಕೃತ ಪತ್ರ ವ್ಯವಹಾರವನ್ನು ಖುದ್ದಾಗಿ ನಿರ್ವಹಿಸುವುದು ಮತ್ತು ಸಿಬ್ಬಂದಿಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಯನ್ನು ವಸ್ತುನಿಷ್ಟವಾಗಿ ತಯಾರಿಸುವುದು.
5. ಸಶಸ್ತ್ರ ಪಡೆಗಳ ಬಗ್ಗೆ ಜನ ಸಾಮಾನ್ಯರಲ್ಲಿ ಅರಿವು ಮೂಡಿಸುವುದು ಮತ್ತು ಮಾಜಿ ಸೈನಿಕರ ಸಮ್ಮೇಳನಗಳನ್ನು ನಡೆಸುವುದು.
6. ಅಭಿಲೇಖ ಕಾರ್ಯಾಲಯಗಳು ಕೋರಿದಾಗ ಸತ್ಯಾಪಣೆ ಕೈಗೊಳ್ಳುವುದು ಮತ್ತು ಮಾಜಿ ಸೈನಿಕರ ಪಿಂಚಣಿ ಮತ್ತು ಇನ್ನಿತರ ವಿಷಯಗಳಿಗೆ ಸಂಬಂಧಿಸಿದಂತೆ ದೃಢೀಕರಣ.

ಮೇಲೆ ತಿಳಿಸಿದ ಕೆಲಸಗಳಲ್ಲದೆ ಈ ಕೆಳಕಂಡ ಕರ್ತವ್ಯಗಳನ್ನು ಸಹ ನಿಭಾಯಿಸತಕ್ಕದ್ದು:–

1. ಪದನಿಮಿತ್ತ ಜಿಲ್ಲಾ ಸೈನಿಕ ಮಂಡಳಿಯ ಕಾರ್ಯದರ್ಶಿಯಾಗಿ ನಿಯತಕಾಲಿಕವಾಗಿ ಸಭೆಯನ್ನು ಏರ್ಪಡಿಸುವುದು.
2. ಆಯವ್ಯಯ ಲೆಕ್ಕ ಪತ್ರಗಳಲ್ಲದೆ ಕಲ್ಯಾಣ ನಿಧಿ, ವಿಶೇಷ ನಿಧಿ ಮತ್ತು ಧ್ವಜ ನಿಧಿ ಲೆಕ್ಕ ಪತ್ರದ ನಿರ್ವಹಣೆ.
3. ಸೈನಿಕ ವಿಶ್ರಾಂತಿ ಗೃಹದ ಪರಿವೀಕ್ಷಣೆ ಮತ್ತು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ನಿರ್ದೇಶನಾಲಯಕ್ಕೆ ವರದಿ ಸಲ್ಲಿಸುವುದು.
4. ಮಿಲಿಟರಿ ವಿದ್ಯಾರ್ಥಿ ನಿಲಯದ ಸಮಗ್ರ ನಿರ್ವಹಣೆ ಹಾಗೂ ಉತ್ತಮ ಕಾರ್ಯ ನಿರ್ವಹಣೆಗಾಗಿ ಸೂಕ್ತ ಸಲಹೆ ನೀಡುವುದು.
5. ನಿಲಯಾರ್ಥಿಗಳಿಗೆ ಸ್ವಚ್ಛ ಹಾಗೂ ಸ್ವಾದಿಷ್ಠ ಊಟೋಪಚಾರದ ವ್ಯವಸ್ಥೆ ಹಾಗೂ ಸಾಂಕ್ರಾಮಿಕ ರೋಗಗಳು ಬಾರದಂತೆ ತಡೆಗಟ್ಟಲು 3 ತಿಂಗಳಿಗೊಮ್ಮೆ ವೈದ್ಯಕೀಯ ತಪಾಸಣೆ ಏರ್ಪಡಿಸುವುದು.
6. ಕಾರ್ಯವ್ಯಾಪ್ತಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರ ಸ್ಥಾನಗಳಿಗೆ ಭೇಟಿ ನೀಡುವುದು. ಒಂದಕ್ಕಿಂತ ಹೆಚ್ಚು ಕಾರ್ಯವ್ಯಾಪ್ತಿ ಜಿಲ್ಲೆಗಳಿದ್ದಲ್ಲಿ, ಪ್ರತಿ ಜಿಲ್ಲೆಗೂ 2 ತಿಂಗಳಿಗೊಮ್ಮೆಯಾದರೂ ಭೇಟಿ ನೀಡುವುದು.

7. ಸಮೂಹ ಮಾಧ್ಯಮದಲ್ಲಿ ಪ್ರವಾಸದ ಬಗ್ಗೆ ಪೂರ್ವಭಾವಿಯಾಗಿ ಪ್ರಚಾರ ನೀಡುವುದು. ಪ್ರವಾಸ ಕೈಗೊಂಡ ಮಾಸಿಕ ವರದಿಯನ್ನು ಮುಂದಿನ ತಿಂಗಳ 15ನೇ ತಾರೀಖಿನೊಳಗೆ ನಿರ್ದೇಶನಾಲಯಕ್ಕೆ ಸಲ್ಲಿಸುವುದು.
8. ಮಾಜಿ ಸೈನಿಕರಿಗೆ, ಯುದ್ಧ ಸಂತ್ರಸ್ತರಿಗೆ ಮತ್ತು ಅವರ ಅವಲಂಬಿತರಿಗೆ ಉದ್ಯೋಗ ಮತ್ತು ಸ್ವಯಂ ಉದ್ಯೋಗ ಒದಗಿಸಿ ಕೊಡಲು ಸ್ಥಳೀಯ ಉದ್ಯೋಗಪತಿಗಳೊಂದಿಗೆ ಮತ್ತು ಪ್ರತಿಷ್ಠಿತ ಉದ್ಯೋಗದಾತರೊಂದಿಗೆ ಸಮನ್ವಯ ಸಾಧಿಸಿ ಉದ್ಯೋಗವಕಾಶ ಕಲ್ಪಿಸುವುದು.
9. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಸ್ಥಳೀಯ ವ್ಯವಸ್ಥಾಪಕರು, ಜಿಲ್ಲಾ ಔದ್ಯೋಗಿಕ ಕೇಂದ್ರ ಮುಂತಾದ ಸಂಸ್ಥೆಗಳೊಂದಿಗೆ ಸಂಪರ್ಕ ಇಟ್ಟುಕೊಂಡು ಮಾಜಿ ಸೈನಿಕರಿಗೆ ಸ್ವಯಂ ಉದ್ಯೋಗ ಕಲ್ಪಿಸಲು ನಿರ್ದೇಶಕರ ಸೂಚನೆಯಂತೆ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುವುದು.
10. ಮಾಜಿ ಸೈನಿಕರ ಮತ್ತು ಅವರ ಅವಲಂಬಿತರ ಕಲ್ಯಾಣಕ್ಕಾಗಿ ಸೂಕ್ತ ನೆರವು ಪಡೆಯಲು ಜಿಲ್ಲಾಧಿಕಾರಿಗಳು ಮತ್ತು ಪೋಲೀಸ್ ಅಧೀಕ್ಷಕರೊಂದಿಗೆ ಉತ್ತಮ ಆತ್ಮೀಯ ಸಂಬಂಧ ಇರಿಸಿಕೊಳ್ಳುವುದು.
11. ಕಛೇರಿ ಕೈಪಿಡಿಯಲ್ಲಿ ನೀಡಿರುವ ಸೂಚನೆಯಂತೆ ಕಾಲ ಕಾಲಕ್ಕೆ ಕಡತಗಳು ಮತ್ತು ಇನ್ನಿತರ ಅನುಪಯುಕ್ತ ದಾಖಲಾತಿಗಳನ್ನು ನಾಶ ಮಾಡುವುದು.
12. ಮಾಜಿ ಸೈನಿಕರಿಗೆ ಸ್ನೇಹಿತನಾಗಿ, ಮಾರ್ಗದರ್ಶಕನಾಗಿ ಮತ್ತು ಬೋಧಕನಾಗಿ, ಮಾಜಿ ಸೈನಿಕ ವರ್ಗಕ್ಕೆ ಸೇವೆ ಸಲ್ಲಿಸುವುದು ಹಾಗೂ ಸ್ಥಳಿಯ ನಾಗರಿಕರೊಂದಿಗೆ ಮಾಜಿ ಸೈನಿಕ ವರ್ಗದ ಪ್ರತಿನಿಧಿತ್ವ ವಹಿಸುವುದು.
13. ರಾಜ್ಯದ ಯುವಜನತೆಯು ಸಶಸ್ತ್ರ ಪಡೆಗಳನ್ನು ಸೇರಲು ಹುರಿದುಂಬಿಸುವ ನಿಟ್ಟಿನಲ್ಲಿ ಉಪಯುಕ್ತ ಮಾಹಿತಿಯನ್ನು ಪ್ರಚಾರ ಪಡಿಸುವುದು.

**ಇಲಾಖೆಯ ಕಾರ್ಯಚಟುವಟಿಕೆಗಳು:**

ಈ ಇಲಾಖೆಯ ಕಾರ್ಯವ್ಯಾಪ್ತಿಯು ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರ ಕಲ್ಯಾಣ ಕಾರ್ಯಗಳಿಗೆ ಮಾತ್ರ ಸೀಮಿತಗೊಂಡಿರುತ್ತದೆ. ಆದುದರಿಂದ ಈ ಇಲಾಖೆಯಿಂದ ಪ್ರಕಟಗೊಂಡ ಮಾಹಿತಿಯು, ಸೈನಿಕರು ಮತ್ತು ಮಾಜಿ ಸೈನಿಕರಿಗೆ ಮತ್ತು ಅವರ ಅವಲಂಬಿತರಿಗೆ ಸೀಮಿತವಾಗಿರುತ್ತದೆ. ಆದುದರಿಂದ, ಸೇವಾ ನಿರತ ಸೈನಿಕರು, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರಿಗೆ ಈ ಇಲಾಖೆಯಿಂದ ಪ್ರಕಟಗೊಳ್ಳುವ ಮಾಹಿತಿಯು ಈ ಕೆಳಗಿನಂತಿದೆ :-

ಇಲಾಖೆಯ ಕೇಂದ್ರ ಕಾರ್ಯಾಲಯವು ಬೆಂಗಳೂರಿನಲ್ಲಿರುತ್ತದೆ. ಜಿಲ್ಲಾ ಕಾರ್ಯಾಲಯಗಳಿಂದ ಬಗೆಹರಿಯದ ಯಾವುದೇ ವಿಷಯವನ್ನು ಈ ನಿರ್ದೇಶನಾಲಯದಿಂದ ಬಗೆ ಹರಿಸಲಾಗುವುದು. ಆದುದರಿಂದ ಈ ವಿಷಯವನ್ನು ಮುಖ್ಯವಾಗಿ ಸೈನಿಕರ, ಮಾಜಿ ಸೈನಿಕರ ಹಾಗೂ ಅವರ ಅವಲಂಬಿತರಿಗೆ ತಿಳಿಸಬೇಕಾಗಿದೆ. ಕಾರಣ ಜಿಲ್ಲಾ ಕಾರ್ಯಾಲಯಗಳಿಂದ ಬಗೆಹರಿಯುವ ಸಮಸ್ಯೆಗಳನ್ನು ಸಹ ನೇರವಾಗಿ ಸರ್ಕಾರಕ್ಕೆ ಬರೆಯುವುದು ಕಂಡು ಬಂದಿದೆ.

(1) ಮೇಲಿನದಲ್ಲದೇ, ಸಂಬಂಧಪಟ್ಟ ಜಿಲ್ಲಾ ಕಾರ್ಯಾಲಯಗಳನ್ನು ಸಂಪರ್ಕಿಸದೆ, ಮಾಜಿ ಸೈನಿಕರು ಹಾಗೂ ಅವರ ಅವಲಂಬಿತರು ನೇರವಾಗಿ ನಿರ್ದೇಶನಾಲಯಕ್ಕೆ ಬರುತ್ತಿರುವುದು ಕಂಡು ಬಂದಿದೆ. ಆದುದರಿಂದ ಅವರ ಯಾವುದೇ ಸಮಸ್ಯೆಯನ್ನು ಮೊದಲು ಜಿಲ್ಲಾ ಕಾರ್ಯಾಲಯದ ಮುಖ್ಯಸ್ಥರಾದ ಜಂಟಿ ; ಉಪ ನಿರ್ದೇಶಕರಿಗೆ ಪ್ರಸ್ತಾಪ ಮಾಡಿ, ಅವರಿಂದ ಬಗೆಹರಿಯದ ಪಕ್ಷದಲ್ಲಿ, ಇಲಾಖಾ ಮುಖ್ಯಸ್ಥರಾದ ನಿರ್ದೇಶಕರಿಗೆ ಪ್ರಸ್ತಾಪಿಸುವುದು. ಇಲಾಖೆಯ ಜಿಲ್ಲಾ ಕಾರ್ಯಾಲಯಗಳ ಸ್ಥಳ ಹಾಗೂ ಕಾರ್ಯವ್ಯಾಪ್ತಿಯು ಈ ಕೆಳಗಿನಂತಿದೆ :-

| ಕ್ರಮ ಸಂಖ್ಯೆ | ಜಿಲ್ಲಾ ಕಾರ್ಯಾಲಯದ ಹೆಸರು ಮತ್ತು ಸ್ಥಳ | ಕಾರ್ಯಾಲಯದ ಕಾರ್ಯವ್ಯಾಪ್ತಿ ಜಿಲ್ಲೆಗಳು |
|---|---|---|
| 1 | 2 | 3 |
| 1. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಬೆಂಗಳೂರು (ನಗರ) ಬೆಂಗಳೂರು-560 025 | ಬೆಂಗಳೂರು (ನಗರ) |
| 2. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ<br>ಇಲಾಖೆ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ,<br>ಬೆಂಗಳೂರು-560 025 | ಬೆಂಗಳೂರು (ಗ್ರಾಮಾಂತರ),<br>ತುಮಕೂರು ಮತ್ತು<br>ಕೋಲಾರ |
| 3. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಳಗಾವಿ | ಬೆಳಗಾವಿ |
| 4. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮೈಸೂರು | ಮೈಸೂರು, ಮಂಡ್ಯ ಮತ್ತು<br>ಚಾಮರಾಜನಗರ |
| 5. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಡಿಕೇರಿ | ಕೊಡಗು ಮತ್ತು ಹಾಸನ |
| 6. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಂಗಳೂರು | ದಕ್ಷಿಣ ಕನ್ನಡ ಮತ್ತು ಉಡುಪಿ |

| 1 | 2 | 3 |
|---|---|---|
| 7. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಶಿವಮೊಗ್ಗ | ಶಿವಮೊಗ್ಗ, ಚಿಕ್ಕಮಗಳೂರು,<br>ಚಿತ್ರದುರ್ಗ ಮತ್ತು ದಾವಣಗೆರೆ |
| 8. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,<br>ಕಾರವಾರ (ಉ.ಕ) | ಉತ್ತರ ಕನ್ನಡ |
| 9. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,<br>ಧಾರವಾಡ | ಧಾರವಾಡ, ಗದಗ, ಹಾವೇರಿ<br>ಮತ್ತು ಬಳ್ಳಾರಿ |
| 10. | ಜಂಟಿ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ವಿಜಾಪೂರ | ವಿಜಾಪೂರ ಮತ್ತು<br>ಬಾಗಲಕೋಟೆ |
| 11. | ಉಪ ನಿರ್ದೇಶಕರು<br>ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಗುಲಬರ್ಗಾ | ಗುಲಬರ್ಗಾ ಬೀದರ, ಕೊಪ್ಪಳ<br>ಮತ್ತು ರಾಯಚೂರು |

(1) ಕರ್ನಾಟಕದಲ್ಲಿ ಅಂದಾಜು 4 ಲಕ್ಷ ಮಾಜಿ ಸೈನಿಕರು ಮತ್ತು ಅವರ ಅವಲಂಬಿತರು ಇರುತ್ತಾರೆ. ಅವರಲ್ಲಿ ಸುಮಾರು 54500 ಮಾಜಿ ಸೈನಿಕರು ಮತ್ತು 13200 ವಿಧವೆಯರು ತಮ್ಮ ಹೆಸರುಗಳನ್ನು ನೋಂದಾಯಿಸಿದ್ದಾರೆ. ಅವರ ಕಲ್ಯಾಣ ಮತ್ತು ಪುನರ್ವಸತಿಗಾಗಿ ಕರ್ನಾಟಕ ಸರ್ಕಾರವು ಈ ಕೆಳಗಿನ ಸೌಲಭ್ಯ ಮತ್ತು ಸವಲತ್ತುಗಳನ್ನು ಜಾರಿಗೊಳಿಸಿದೆ :-

1. ಉದ್ಯೋಗ ಮೀಸಲಾತಿ.
2. ವಯೋಮಿತಿ ಸಡಿಲಿಕೆ ಹಾಗೂ ಶುಲ್ಕ ವಿನಾಯಿತಿ.
3. ವೇತನ ನಿಗದಿ.
4. ತಾಂತ್ರಿಕ, ವೈದ್ಯಕೀಯ, ವೃತ್ತಿಪರ ಶಿಕ್ಷಣ ಹಾಗೂ ಇತರ ಕೋರ್ಸುಗಳಲ್ಲಿ ಮಾಜಿ ಸೈನಿಕರ ಮಕ್ಕಳಿಗೆ ಸೀಟುಗಳನ್ನು ಕಾಯ್ದಿರಿಸುವಿಕೆ.
5. ವೈದ್ಯಕೀಯ ಸವಲತ್ತು.
6. ಯುದ್ಧದಲ್ಲಿ ಮಡಿದ ಯೋಧರ ಅವಲಂಬಿತರಿಗೆ ಅನುಗ್ರಹ ಪೂರಕ ಅನುದಾನ, ಜಮೀನು ಅಥವಾ ಅದರ ಬದಲಾಗಿ ನಗದು ಅನುದಾನ ಮತ್ತು ಉಚಿತ ಗೃಹ ನಿರ್ಮಾಣ.
7. ಶೌರ್ಯ ಹಾಗೂ ಶೌರ್ಯೇತರ ಪ್ರಶಸ್ತಿ ವಿಜೇತರಿಗೆ ನಗದು ಅನುದಾನ ಮತ್ತು ಜಮೀನು ಅಥವಾ ಅದರ ಬದಲಾಗಿ ನಗದು ಅನುದಾನ.
8. ಎರಡನೇ ಮಹಾಯುದ್ಧದಲ್ಲಿ ಭಾಗವಹಿಸಿ ಪಿಂಚಣಿ ಇಲ್ಲದೆ ಬಿಡುಗಡೆಯಾದ ಯೋಧರಿಗೆ ಮತ್ತು ಮೃತ ಯೋಧರ ವಿಧವೆಯರಿಗೆ ಮಾಸಿಕ ಗೌರವಧನ.
9. 1971 ರ ಮುಂಚಿನ ಯುದ್ಧದಲ್ಲಿ ಹುತಾತ್ಮರಾದ ಯೋಧರ ವಿಧವೆಯರಿಗೆ ರೂ 500/- ಗಳ ಮಾಸಿಕ ಗೌರವಧನ.
10. ಮಿಲಿಟರಿ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯ ಸೌಲಭ್ಯಗಳು.
11. ಸೈನಿಕ ವಿಶ್ರಾಂತಿ ಗೃಹದ ಸೌಲಭ್ಯಗಳು.
12. ಶಿಷ್ಯ ವೇತನ/ಪುಸ್ತಕ ಅನುದಾನಗಳು.
13. ಯುದ್ಧ ಪ್ರಶಸ್ತಿ (ವಾರ್ ಅವಾರ್ಡ್).
14. ಧನ ಸಹಾಯಗಳು
    (ಅ) ವಾರ್ಷಿಕ ಪರಿಹಾರ ಧನ ಸಹಾಯ.
    (ಬ) ಮರಣೋತ್ತರ ಪರಿಹಾರ ಧನ ಸಹಾಯ.
    (ಕ) ಸ್ಥಳೀಯ ಧನ ಸಹಾಯ.

ಸ್ಥಳ: ಬೆಂಗಳೂರು
ದಿನಾಂಕ: ಆಗಸ್ಟ್ 2003

**ಕರ್ನಲ್ ಸಿ.ಎಂ. ಉತ್ತಪ್ಪ, (ನಿವೃತ್ತ)**
ನಿರ್ದೇಶಕರು,
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಬೆಂಗಳೂರು.

ಪಿ.ಆರ್.147

**FORM No.29**

**DECLARATION UNDER SUB-SECTION (5) OF SECTION 68 RULE 96**

In exercise of the power conferred by sub-section (5) of section 68 of the Karnataka Land Revenue Act, 1964, the State Government being satisfied after considering the record of the proceedings and the report of the Deputy Commissioner, Bangalore Rural District that the part of the Beside public road attached to Sy. No. 86 of Hosahalli part thereof specified in the schedule to the notification Form No. 27 Declaration U/S 68(i) Rule 94 dated: 18.01.2002 issued under sub-section (1) of the said section and specified in the Schedule below as not required for the use of the public, hereby declares that all rights of the public as well as of persons in or over such part of the public road are extinguished.

**SCHEDULE**

| | | |
|---|---|---|
| Village in which the part of the Land is situated | : | Hosahalli<br>Sathanuru Hobli |
| Taluk | : | Kanakapura Taluk |
| District | : | Bangalore Rural |
| Description of the part of the Road | : | Beside the Sy.No. 86 of Hosahalli, Number Kanada Kharab |
| Approximate area of the part of the Land | : | 0-04 (Four Guntas only) |

**Boundaries:**

East by : Sathnuru -(ChannaPatna Road)
West by : Sy. No. 86/8
North by : Sy. No. 86/8
South by : Sy. No. 86/8

Tahsildar,
Kanakapura Taluk, Kanakapura.

PR-148

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಉಪನಗರ**

**ನಮೂನೆ-27**

**ಭೂ ಕಂದಾಯ ಅಧಿನಿಯಮ 68(1)ನೇ ಪ್ರಕರಣದ ಘೋಷಣೆ ಸಂ: ಎಲ್‌ಎನ್‌ಡಿ:ಸಿಆರ್:242:2003-04**

ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಲಹಂಕ ಹೋಬಳಿ, ಹಾರೋಹಳ್ಳಿ ಗ್ರಾಮದ ಸರ್ವೆ ನಂ. 91ರಲ್ಲಿನ ಒಟ್ಟು ಸರ್ಕಾರಿ ಕೆರೆ ವಿಸ್ತೀರ್ಣ 74 ಎಕರೆ 32 ಗುಂಟೆ ಜಮೀನನ್ನು ಅಂದರೆ ಕೆರೆಯು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣ(1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಸರ್ಕಾರಿ ಕೆರೆ ಭಾಗವನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮಾತ್ರ ಕೆರೆಯ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತ್ತವೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿದೆ.

ಈ ರೀತಿ ಸದರಿ ಕೆರೆಯ ಭಾಗವನ್ನು ಸಾರ್ವಜನಿಕ ಉದ್ದೇಶದಿಂದ ಖಾಯಂ ಆಗಿ ಮುಚ್ಚಲು ಉದ್ದೇಶಿಸಿದೆ. ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಯಾವುದೇ ವ್ಯಕ್ತಿ ಸಂಘ ಸಂಸ್ಥೆ ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳ ಒಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮದ ರೀತಿಯನ್ನು ಹಾಗೂ ಅದರ ವಿವರಗಳನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

ಜಿಲ್ಲೆ: ಬೆಂಗಳೂರು
ತಾಲ್ಲೂಕು: ಬೆಂಗಳೂರು ಉತ್ತರ (ಅಪರ) ತಾ:
ಹೋಬಳಿ: ಯಲಹಂಕ
ಸರ್ವೆ ನಂ.: 91, ಸರ್ಕಾರಿ ಕೆರೆ
74 ಎಕರೆ 32 ಗುಂಟೆ
ಹಾರೋಹಳ್ಳಿ ಗ್ರಾಮ

**ಈ ಕೆರೆಯ (ಸರ್ಕಾರಿ) ಚೆಕ್ಕುಬಂದಿ**

ಪೂರ್ವ:
ಪಶ್ಚಿಮ:
ಉತ್ತರ:
ದಕ್ಷಿಣ:

**ವಿ. ನಾರಾಯಣಸ್ವಾಮಿ**
ತಹಸೀಲ್ದಾರ್,
ಬೆಂಗಳೂರು ಉತ್ತರ ತಾಲ್ಲೂಕು (ಅಪರ)
ಯಲಹಂಕ ಉಪನಗರ.

ಪಿ.ಆರ್.149

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:107/ಸಂವಿ/ಸಿಪಿ/2003, ದಿನಾಂಕ:17ನೇ ಡಿಸೆಂಬರ್, 2003**

ಬೆಂಗಳೂರು ನಗರದ ಬಹುಮಹಡಿ ಕಟ್ಟಡದ ಆವರಣ (ಎಂ.ಎಸ್. ಬಿಲ್ಡಿಂಗ್) ಸುತ್ತಮುತ್ತಲಿನ ಪ್ರದೇಶಗಳಲ್ಲಿ ಖಾಸಗಿ ವಾಹನಗಳ ಓಡಾಟದಿಂದ ಎಂ.ಎಸ್. ಬಿಲ್ಡಿಂಗ್ ಕಛೇರಿಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಗಳಿಗೆ ವಾಹನಗಳ

ನಿಲುಗಡೆಗೆ ಅಡ್ಡಿಯುಂಟಾಗುತ್ತಿದೆ. ಅಲ್ಲದೆ ವಿಧಾನ ಸೌಧದ ಆವರಣದಲ್ಲಿರುವ ಕಛೇರಿಗಳಿಗೂ ಸಹ ಅನೇಕ ಖಾಸಗಿ ವಾಹನಗಳು ಬರುತ್ತಿದ್ದು ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುವುದಲ್ಲದೆ ಭದ್ರತೆಗೂ ಸಹ ತೊಡಕಾಗುವ ಸಾಧ್ಯತೆಗಳಿವೆ.

ಆದ್ದರಿಂದ ಸಾರ್ವಜನಿಕರ ಹಿತದೃಷ್ಟಿಯಿಂದ ಮತ್ತು ಸುಗಮ ಸಂಚಾರದ ಸಲುವಾಗಿ ಎಂ.ಎಸ್. ಬಿಲ್ಡಿಂಗ್ ಹಾಗೂ ವಿಧಾನ ಸೌಧದ ಎರಡೂ ದ್ವಾರಗಳಿಂದ ಅಂದರೆ ಡಾ: ಬಿ.ಆರ್. ಅಂಬೇಡ್ಕರ್ ವೀಧಿ ಮತ್ತು ಡಿ. ದೇವರಾಜ ಅರಸು ರಸ್ತೆಯಿಂದ ಬರುವ ಎಲ್ಲ ಖಾಸಗಿ ವಾಹನಗಳನ್ನು ಎಂ.ಎಸ್. ಬಿಲ್ಡಿಂಗ್ ಆವರಣ ಹಾಗೂ ವಿಧಾನ ಸೌಧದ ಸುತ್ತಮುತ್ತಲೂ ಪ್ರವೇಶಿಸುವುದನ್ನು ನಿಷೇಧಿಸಲಾಗಿದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆ್ಯಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿಬಂಧನೆಗಳನ್ನು ಆದೇಶಿಸಿರುತ್ತೇನೆ.

| | | | |
|---|---|---|---|
| 1. | ಬಹುಮಹಡಿ ಕಟ್ಟಡ ಆವರಣ | : | ಎಲ್ಲಾ ತರಹದ ಖಾಸಗಿ ವಾಹನಗಳಿಗೆ ಎಲ್ಲಾ ದಿಕ್ಕಿನಿಂದ ಪ್ರವೇಶವನ್ನು ನಿಷೇಧಿಸಲಾಗಿದೆ. |
| 2. | ಡಿ. ದೇವರಾಜ ಅರಸು ರಸ್ತೆ | : | ಬಹು ಮಹಡಿ ಕಟ್ಟಡಕ್ಕೆ ಹಾಗೂ ವಿಧಾನ ಸೌಧಕ್ಕೆ ಬರುವ ಎಲ್ಲ ತರಹದ ಖಾಸಗಿ ವಾಹನಗಳಿಗೆ ಡಿ. ದೇವರಾಜ ರಸ್ತೆಯಲ್ಲಿ ಮಹಾಲೇಖಪಾಲರ (ಎ.ಜಿ. ಕಛೇರಿ) ಕಛೇರಿ ಜಂಕ್ಷನ್‌ನಿಂದ ವಿಧಾನ ಸೌಧ ಸೌತ್ ಬ್ಲಾಕ್‌ವರೆಗೆ ಇರುವ ಸ್ಥಳದಲ್ಲಿ ತಾತ್ಕಾಲಿಕವಾಗಿ ವಾಹನ ನಿಲುಗಡೆಗೆ ಅವಕಾಶ ಕೊಡಲಾಗಿದೆ. |

ಈ ಆದೇಶವನ್ನು ಕಲಂ 116 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆ್ಯಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ದಿನಾಂಕ:17.12.2003ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಪಿ.ಆರ್.150 ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:108/ಸಂವಿ/ಸಿಒಪಿ/2003, ದಿನಾಂಕ:17ನೇ ಡಿಸೆಂಬರ್, 2003**

ಹಾಲಿ ಬೆಂಗಳೂರು ನಗರ ಹಲಸೂರು ಸಂಚಾರ ಉಪ ವಲಯದ ಸರಹದ್ದಿನಲ್ಲಿರುವ ಏರ್‌ಪೋರ್ಟ್ ರಸ್ತೆ ಮತ್ತು ಎ.ಎಸ್.ಸಿ. ಜಂಕ್ಷನ್ ಬಳಿ ಟ್ರಿನಿಟಿ ವೃತ್ತದ ಕಡೆಯಿಂದ ಇಂಡಿಯಾ ಗ್ಯಾರೇಜ್ ಕಡೆಗೆ ಹೋಗುವ ವಾಹನಗಳಿಗೆ ಬಲತಿರುವು ತೆಗೆದುಕೊಳ್ಳಲು ಅನುಮತಿಸಲಾಗುತ್ತಿದೆ. ಆದರೆ ಈ ಭಾಗದಲ್ಲಿ ಅಧ್ಯಯನದ ಪ್ರಕಾರ ಬಲಕ್ಕೆ ತಿರುಗುವ ವಾಹನಗಳು ತೀರಾ ಕಡಿಮೆ ಇರುವ ಪ್ರಯುಕ್ತ, ವಾಹನಗಳು ಇಂಡಿಯಾ ಗ್ಯಾರೇಜ್ ತಲುಪಬೇಕಾದಲ್ಲಿ ಟ್ರಿನಿಟಿ ಚರ್ಚ್‌ನಿಂದ ರಿಚ್ಮಂಡ್ ರಸ್ತೆಯ ಮೂಲಕ ತಲುಪಲು ಅವಕಾಶವಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ವಾಹನ ಸಂಚಾರವನ್ನು ನಿರ್ಬಂಧಿಸಿದಲ್ಲಿ ಸುಗಮ ಸಂಚಾರ ಇರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆ್ಯಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿಬಂಧನೆಯನ್ನು ಆದೇಶಿಸಿರುತ್ತೇನೆ.

"ಟ್ರಿನಿಟಿ ವೃತ್ತದ ಕಡೆಯಿಂದ ಎ.ಎಸ್.ಸಿ. ಸೆಂಟರ್ ಜಂಕ್ಷನ್ ಬಳಿ ಬಂದ ಎಲ್ಲಾ ತರಹದ ವಾಹನಗಳು ಬಲಕ್ಕೆ ತಿರುಗುವುದನ್ನು ನಿಷೇಧಿಸಲಾಗಿದೆ".

ಅಂತೆಯೇ ಕಲಂ 116 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆ್ಯಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ದಿನಾಂಕ:24.12.2003ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಪಿ.ಆರ್.151 ಬೆಂಗಳೂರು ನಗರ.

**HIGH COURT OF KARNATAKA, BANGALORE**

**Sub:** In the matter of alteration of date of birth enquiry of Sri Chandrashekhar V. Margoor, Addl. Civil Judge (Jr.Dn.) and JMFC, Mudigere, now working as Under Secretary to Government, Legal Cell, Karnataka Bhavan, New Delhi.

**Read:**

Application dated:31.07.1999 submitted by Sri Chandrashekhar V. Margoor, Civil Judge (Jr.Dn.) and JMFC, Mudigere, now working as Under Secretary to Government, Legal Cell, Karnataka Bhavan,

New Delhi under Sec.5(2) of the Karnataka State Government Servant's (Determination of Age Act) 1974, requesting for alteration of his date of birth from 01.05.1963 to 21.05.1964.

**Preamble:**

The Registrar (vigilance), Specially Empowered Authority, High Court of Karnataka, Bangalore who has been appointed as the Enquiry Officer under Section 5(3) of the said Act, has considered the application filed by the applicant, held an enquiry under the said Act and after considering the evidence produced by the Officer Sri. Chandrashekhar V. Margoor, Civil Judge (Jr.Dn.) and JMFC, Mudigere, now working as Under Secretary to Government, Legal Cell, Karnataka Bhavan, New Delhi and the entire records, submitted his report recommending to accept the prayer of the Officer to alter his date of birth in the Service Records from 01.05.1963 to 21.05.1964.

**ORDER No. DDB.2/2001, Dated: 22nd January, 2004**

The High Court is pleased to accept the findings of the Enquiry Officer viz., Registrar (Vigilance), High Court of Karnataka, Bangalore and accordingly orders that, the date of birth of Sri Chandrashekhar V. Margoor, Civil Judge (Jr.Dn.) & JMFC, Mudigere, now working as Under Secretary to Government, Legal Cell, Karnataka Bhavan, New Delhi is altered from 01.05.1963 to 21.05.1964 (First day of May one thousand nine hundred sixty three to twenty first day of May one thousand nine hundred and sixty four) under Sec.5(1) of the Karnataka State Government Servants (Determination of Age) Act, 1974.

BY THE ORDER OF THE HIGH COURT,

**A.S. PACHHAPURE**

REGISTRAR (VIGILANCE) &

PR-152 ENQUIRING OFFICER.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಹಾವೇರಿ ಜಿಲ್ಲೆ ಇವರಿಂದ**

**ವಿಷಯ:** ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43ರ ಅಡಿಯಲ್ಲಿ ಜಪ್ತಿ ಮಾಡಿದ ವಾಹನಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಈ ಕೆಳಕಂಡ ವಾಹನಗಳನ್ನು ಹಾವೇರಿ ಜಿಲ್ಲೆಯಲ್ಲಿ ವಿವಿಧ ಅಬಕಾರಿ ಪ್ರಕರಣಗಳಲ್ಲಿ ಜಪ್ತಿ ಮಾಡಿದ್ದು ಇರುತ್ತದೆ. ಸದರಿ ವಾಹನಗಳ ಮಾಲಿಕತ್ವ ಸ್ಥಾಪಿಸಲು ಇಂದಿನವರೆಗೆ ಯಾರು ಈ ಪ್ರಾಧಿಕಾರಕ್ಕೆ ಹಾಜರಾಗಿರುವುದಿಲ್ಲ ಮತ್ತು ಮನವಿ ಸಲ್ಲಿಸಿರುವುದಿಲ್ಲ. ಸಾರಿಗೆ ಇಲಾಖೆಯಿಂದ ಪಡೆಯಲಾದ ಮಾಹಿತಿಯ ಆಧಾರದ ಮೇಲೆ ಮಾಲಿಕರಿಗೆ ಕಳುಹಿಸಿದ ಪತ್ರಗಳು ವಿಲೇ ಆಗಿರುವುದಿಲ್ಲ. ಆದ್ದರಿಂದ ಈ ಪ್ರಕಟಣೆಯ ಹದಿನೈದು ದಿನಗಳ ಒಳಗೆ ಸದರಿ ವಾಹನದ ಮಾಲಿಕರು ತಮ್ಮ ಹಕ್ಕನ್ನು ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿ ಹಾಜರಾಗತಕ್ಕದ್ದು. ಇದೇ ಜಾಹೀರಾತನ್ನು ಸ್ಥಳೀಯ ಕನ್ನಡ ದಿನ ಪತ್ರಿಕೆಗಳಲ್ಲಿಯೂ ಪ್ರಕಟಿಸಲಾಗಿದೆ. ಆದಾಗ್ಯೂ ವಾಹನದ ಮಾಲಿಕತ್ವ ಕೋರಿ 15 ದಿನಗಳ ಒಳಗೆ ಯಾರೂ ಪ್ರಾಧಿಕಾರಕ್ಕೆ ಹಾಜರಾಗದಿದ್ದಲ್ಲಿ ಅಥವಾ ಅರ್ಜಿ ಸಲ್ಲಿಸದೇ ಇದ್ದಲ್ಲಿ ಅಬಕಾರಿ ಕಾನೂನು 43(ಎ) ಅಡಿಯಲ್ಲಿ ಅಂಥಹ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಂದಿನ ಕ್ರಮಕೈಗೊಳ್ಳಲಾಗುವುದು.

ಪ್ರಾಧಿಕೃತ ಅಧಿಕಾರಿಗಳು ಮತ್ತು

ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್

ಹಾವೇರಿ ಜಿಲ್ಲೆ, ಹಾವೇರಿ.

**ಅನುಬಂಧ-1**

| ಕ್ರ. ಸಂ. | ಪ್ರಥಮ ವರ್ತಮಾನ ವರದಿ ನಂ/ ದಿನಾಂಕ ಗುನ್ಹೆ ದಾಖಲು ಮಾಡಿದ ಅಧಿಕಾರಿ | ವಾಹನದ ನೋಂದಾಣಿ ಸಂಖ್ಯೆಯ ಫಲಕ | ಇಂಜಿನ್ ನಂಬರ್ | ಚಾಸಿಸ್ ನಂಬರ್ | ಜಪ್ತಿಮಾಡಿದ ಮಾದಕ ದ್ರವ್ಯಗಳ ವಿವರ |
|---|---|---|---|---|---|
| 1 | 2 | 3 | 4 | 5 | 6 |
| 1. | ಸಿ.ಆರ್.ನಂ.16/2002-03 ದಿನಾಂಕ:27.07.2002 | ಅಂಬಾಸೆಡರ್ ಕಾರ್ ನಂ: ಕೆಎ-25/3279 | -- | -- | 30x48x180 ಎಂ.ಎಲ್. ಡಾಲರ್ ವಿಸ್ಕಿ |
| | ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ಹಾವೇರಿ ಉಪವಿಭಾಗ. | | | | 5x48x180 ಎಂ.ಎಲ್. ಖೋಡೆಸ್ ತ್ರಿ ಎಕ್ಸ್‌ರಂ. |
| 2. | ಸಿ.ಆರ್.ನಂ.29/2002-03 ದಿನಾಂಕ:25.10.2002 | ಬಜಾಜ್ ಎಂ-80 ನಂ: ಸಿಟಿಯು-1444 | 16 ಇ 031772 | 16 ಸಿ 031073 | 1x48x180 ಎಂ.ಎಲ್. ರಾಜಾ ವಿಸ್ಕಿ |
| | ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ರಾಣೇಬೆನ್ನೂರು ಉಪವಲಯ. | | | | |

| 1 | 2 | 3 | 4 | 5 | 6 |
|---|---|---|---|---|---|
| 3. | ಸಿ.ಆರ್.ನಂ.139/2002<br>ದಿನಾಂಕ:04.10.2002 | ಅಂಬಾಸೆಡರ್ ಕಾರ್ ನಂ:ಸಿಟಿಡಬ್ಲ್ಯೂ-78 | ಓಇಎಫ್ 6189 | 111-132111 | 21x48x180 ಎಂ.ಎಲ್. ಖೋಡೆಸ್ ತ್ರಿ ಎಕ್ಸ್ ರಂ |
| | ಸಿ.ಪಿ.ಐ. ಹಾವೇರಿ | | | | 10x48x180 ಎಂ.ಎಲ್. ಓಲ್ಡ್ ಟಾವರಿನ್ ವಿಸ್ಕಿ ನಾಶಪಡಿಸಲಾಗಿದೆ. |
| 4. | ಸಿ.ಆರ್.ನಂ.35/2002-03<br>ದಿನಾಂಕ:28.03.2003 | ಟಾಟಾ ಲಾರಿ ನಂ: ಸಿಎನ್‌ಬಿ-5211 | 692 ಡಿ 02798437 | 344052794678 | 40x48x180 ಎಂ.ಎಲ್. ಓರಿಜಿನಲ್ ಚಾಯ್ಸ್ ವಿಸ್ಕಿ |
| | ಅಬಕಾರಿ ಇನ್ಸ್‌ಪೆಕ್ಟರ್, ರಾಣೇಬೆನ್ನೂರು ಉಪವಿಭಾಗ. | | | | 45x48x180 ಎಂ.ಎಲ್. ಖೋಡೆಸ್ ತ್ರಿ ಎಕ್ಸ್‌ರಂ. |
| | | | | | 40x48x180 ಎಂ.ಎಲ್. ಬೆಗ್ ಪೈಪರ್ ವಿಸ್ಕಿ. |
| | | | | | 35x48x180 ಎಂ.ಎಲ್. ಓಲ್ಡ್ ಟಾವರಿನ್ ವಿಸ್ಕಿ ನಾಶಪಡಿಸಲಾಗಿದೆ. |
| 5. | ಸಿ.ಆರ್.ನಂ.01/2002-03<br>ದಿನಾಂಕ:08.05.2003<br>ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ರಾಣೇಬೆನ್ನೂರು ಉಪವಿಭಾಗ. | ಅಶೋಕ ಲೈಲ್ಯಾಂಡ್ ಲಾರಿ ನಂ:ಕೆಎ-02 ಎಎ-9369 | ಎಎಲ್‌ಇಜಿ 29103 | ಎಎಲ್‌ಜಿ 168679 | 550x48x180 ಎಂ.ಎಲ್. ಬೆಸ್ಟೊ ವಿಸ್ಕಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. |
| 6. | ಸಿ.ಆರ್.ನಂ.30/2000-01<br>ದಿನಾಂಕ:25.11.2000<br>ಇಐ.IV, ರಾಜ್ಯ ಇಐಬಿ | ಟ್ಯಾಂಕರ್ ನಂ:ಟಿಎನ್-09-ಎ-6928 | - | - | 12.000Letter ಆರ್‌ಎಸ್ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. |

ಪ್ರಾಧಿಕೃತ ಅಧಿಕಾರಿಗಳು ಮತ್ತು
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್
ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್.153

**ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**
**ಸಂಖ್ಯೆ:ಎ1:ಅಸಂದ:ಅಮೊ:26:03-04, ದಿನಾಂಕ:22ನೇ ಜನವರಿ, 2004**

**ಉಪಸ್ಥಿತರು:** ಶ್ರೀ ಕೆ. ಲೋಕನಾಥಶೆಟ್ಟಿ
ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ.

**ಪ್ರಸ್ತಾವನೆ:**

ದಿನಾಂಕ:30.08.03 ರಂದು ಒಂದು ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿ.ಟಿ.ಕ್ಯೂ:4683 ರಲ್ಲಿ ಒಟ್ಟು 84 ಕೆಜಿ ಶ್ರೀಗಂಧವನ್ನು ಯಾರೋ ಅಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ ತಾಲ್ಲೂಕು ಮುದುವಾಲದ ಬಳಿ ಇರುವ ನೀಲಗಿರಿ ತೋಪಿನ ಕೆರೆ ಬಳಿಯಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ, ಶಿವಮೊಗ್ಗ ಅರಣ್ಯ ಸಂಚಾರಿ ದಳದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು, ಪಂಚನಾಮೆ ಕ್ರಮ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:26:03-04ನ್ನು ದಾಖಲು ಮಾಡಿಕೊಂಡು ವಾಹನ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿಟಿಕ್ಯೂ:4683 ಇಂಜಿನ್ ನಂ.6 ಇಹೆಚ್ ಒ 35037 ಛಾಸ್ಸಿ ನಂ. 111-548277 ಡಿಸೇಲ್ ಡಿಎಕ್ಸ್ ಎಂದಿರುತ್ತದೆಂದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಅಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು: ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:13.09.03ರ ಛಾಯ್ಸ್ ಆಫ್ ಶಿವಮೊಗ್ಗ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:15.09.03ರ ನಾವಿಕ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ 25ನೇ ಸೆಪ್ಟೆಂಬರ್ 2003ರ ಭಾಗ-3 ಪುಟಸಂಖ್ಯೆ:1360ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಲ್ಲಿ ಪತ್ರ ವ್ಯವಹರಿಸಿದಾಗ, ವಾಹನದ ಬಿ ವರದಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ, ಸಿಟಿಕ್ಯೂ-4683 ವಾಹನದ ಬಿ ವರದಿಯಾಗಿದ್ದು, ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳನ್ನು ಪರಿಶೀಲಿಸಿದಾಗ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಇಂಜಿನ್ ನಂಬರ್ ಹಾಗೂ ಬಿ ವರದಿಯಲ್ಲಿ ನಮೂದಿಸಿದ ಇಂಜಿನ್ ನಂಬರ್‌ಗಳು ತಾಳೆಯಾಗಿರುವುದಿಲ್ಲ. ಆದರೆ ಛಾಸ್ಸಿ ನಂಬರ್ ಮಾತ್ರ ತಾಳೆ ಹೊಂದುತ್ತದೆ. ಮುಂದುವರಿದು ಬಿ ವರದಿಯಂತೆ ವಾಹನವು ದಿನಾಂಕ:14.12.2000 ರಿಂದ ಹೆಚ್.ಎನ್. ಮೇಘರಾಜ್ ಬಿನ್ ನಿಜಲಿಂಗಯ್ಯ ಮೂರನೇ ಕ್ರಾಸ್, ಮುಖ್ಯ ರಸ್ತೆ, ಶಿವಮೊಗ್ಗ ಎಂಬುವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿದನ್ವಯ ಈ ಪ್ರಾಧಿಕಾರದಿಂದ ದಿನಾಂಕ:23.09.03 ರಂದು ಹೆಚ್.ಎನ್. ಮೇಘರಾಜ್ ಇವರಿಗೆ ಕಾರಣ ಕೇಳುವ ಪತ್ರವನ್ನು ಜಾರಿ ಮಾಡಿದಾಗ, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ, ಅಲ್ಲದೇ ಪ್ರಕಟಣೆಯಂತೆ 30 ದಿವಸದೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮ ಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತು ಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬಾರದೇ ಇರುವುದರಿಂದ, ಇನ್ನು ಮುಂದೆ ಬರುವ ಸಾಧ್ಯತೆಯು ಇಲ್ಲದಿರುವ ಕಾರಣ ಅಲ್ಲದೇ ಮಾಲಿಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:30.08.03ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಪಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಾಹನವನ್ನು ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿ, ಸದರಿ ದಾಖಲಾತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:30.08.03 ರಂದು ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿಟಿಕ್ಯೂ:4683 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ: ಸಿ.ಟಿ.ಕ್ಯೂ:4683 ಇಂಜಿನ್ ನಂ.6 ಇಹೆಚ್‌ಓ 35037, ಛಾಸ್ಸಿ ನಂ.111-548277 ಡಿಸೇಲ್ ಡಿಎಕ್ಸ್ ಮತ್ತು 84 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:22.01.04ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:22.01.04ರಂದು ಬೆರಳಚ್ಚು ಮಾಡಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಕೆ. ಲೋಕನಾಥಶೆಟ್ಟಿ,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ,
ಶಿವಮೊಗ್ಗ ವೃತ್ತ, ಶಿವಮೊಗ್ಗ.

ಪಿ.ಆರ್.154

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪವಿಭಾಗ, ಸಾಗರ ಇವರ ಕಛೇರಿಯ ನಡವಳಿಕೆಗಳು

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38(7)ರ ಮೇರೆಗೆ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ ಪತ್ರ ನೀಡುವ ಕುರಿತು.

**ಉಲ್ಲೇಖ:**
1. ಮೂಲ ದಾವಾ ಸಂಖ್ಯೆ:124:02-03 ತೀರ್ಪು ದಿನಾಂಕ:19.08.02 (2) 125:02-03 ತೀರ್ಪು ದಿನಾಂಕ: 16.08.02 (3) 126:02-03 ತೀರ್ಪು ದಿನಾಂಕ:16.08.02 (4) 128:02-03 ತೀರ್ಪು ದಿನಾಂಕ:16.08.02 ತೀರ್ಪುಗಳನ್ನು ಗಮನಿಸಿದೆ.
2. ಅಮಲ್ಜಾರಿ ಪ್ರಕರಣ ಸಂಖ್ಯೆ:509:02-03 ದಿನಾಂಕ:11.02.03 (2) 510:02-03 ದಿನಾಂಕ:11.02.2003, (3) 511:02-03 ದಿನಾಂಕ:11.02.03 (4) 512:02-03 ದಿನಾಂಕ:11.02.03 ಮ್ಯಾನೇಜರ್, ದಿ. ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇವರು ದಾಖಲು ಮಾಡಿರುವರು.
3. ಮಾರಾಟಾಧಿಕಾರಿಗಳು ಹಾಗೂ ಲೆಕ್ಕಿಗರು, ದಿ. ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇವರ ಪ್ರಸ್ತಾವನೆ ಪತ್ರ ಸಂಖ್ಯೆ:364:03-04 ದಿನಾಂಕ:18.11.03 ಮತ್ತು 20.01.2004.

ಶ್ರೀ ಜೆ.ಬಿ. ಪದಮ್‌ಕುಮಾರ್ ಬಿನ್ ಷಾ ಭವರ್‌ಲಾಲ್ (2) ಶ್ರೀಮತಿ ಚಂಪಾಬಾಯಿ ಕೋಂ ಷಾ ಭವರ್‌ಲಾಲ್ (3) ಶ್ರೀಮತಿ ಸುನೀತಾ ಗಾಧಿಯಾ ಕೋಂ ಪದಮ್‌ಕುಮಾರ್ (4) ಶ್ರೀ ಜೆ.ಬಿ. ಪದಮ್‌ಕುಮಾರ್ ಬಿನ್ ಷಾ ಭವರ್‌ಲಾಲ್ ಇವರು ಬಟ್ಟೆ ವ್ಯಾಪಾರದಿಂದ ಜೀವನ ಮಾಡುತ್ತಿದ್ದು, ದಿ. ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇವರಲ್ಲಿ ಸದಸ್ಯತ್ವ ಪಡೆದು ವ್ಯಾಪಾರದ ಸಲುವಾಗಿ ದಿನಾಂಕ: 09.11.2000ರಂದು ಸ್ಥಿರಾಸ್ತಿ ಆಧಾರದೊಂದಿಗೆ ರೂ. 150000-00, ದಿನಾಂಕ:26.07.2000ರಂದು ರೂ.24000-00, ದಿನಾಂಕ:26.07.2000ರಂದು ರೂ. 24000-00, ದಿನಾಂಕ:09.11.2000ರಂದು ರೂ. 24000-00 ಹೀಗೆ ಒಟ್ಟು ರೂ.222000-00ಗಳನ್ನು ಸಾಲವಾಗಿ ಪಡೆದುಕೊಂಡಿರುತ್ತಾರೆ. ರೂ.150000-00 ಗಳ ಸಾಲಕ್ಕೆ ಸಂಬಂಧಪಟ್ಟಂತೆ (1) ಶ್ರೀ ಜೆ.ಬಿ. ಪದಮ್‌ಕುಮಾರ್ ಬಿನ್ ಷಾ ಭವರ್‌ಲಾಲ್ (2) ಶ್ರೀಮತಿ ಚಂಪಾಬಾಯಿ ಕೋಂ ಷಾ ಭವರ್‌ಲಾಲ್ (3) ಶ್ರೀ ಅಂಬಾಲಾಲ್ ಬಿನ್ ಷಾ ಭವರ್‌ಲಾಲ್ ಇವರುಗಳು ಸಂಯುಕ್ತವಾಗಿ ತಮಗೆ ಸೇರಿದ ಸ್ಥಿರಾಸ್ತಿ ಅಂದರೆ ಶಿಕಾರಿಪುರ ಟೌನ್, ಮಂಡಿಕೇರಿ ದಕ್ಷಿಣ ಭಾಗದ ಮುನ್ಸಿಫಲ್ ಅಸೆಸ್‌ಮೆಂಟ್ ನಂ.67:67 (ಹಳೇ ನಂ.61:61)ರ 15x112+105/2 ರ ಅಡಿ ವಿಸ್ತೀರ್ಣದ ನಿವೇಶನ ಹಾಗೂ ಇದರಲ್ಲಿ ಇರುವ 15x11 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿಮನೆ. 15x33 ಅಡಿ ವಿಸ್ತೀರ್ಣದ ಮಂ.ಹೆಂ. ಮಹಡಿಮನೆ, 15x41 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿಮನೆ, 15x16 ಅಡಿವಿಸ್ತೀರ್ಣದ ಮಂ.ಹೆಂ. ಮಹಡಿಮನೆ 15x10 ಅಡಿ ವಿಸ್ತೀರ್ಣದ ಮಹಡಿ ಇಲ್ಲದ ಮನೆ (ಹಿಂಭಾಗದಲ್ಲಿ) ಆಧಾರ ಮಾಡಿ ಕೊಟ್ಟಿರುತ್ತಾರೆ. ಈ ಆಧಾರ ಪತ್ರಕ್ಕೆ ಮೇಲ್ಕಂಡ ಮೂವರು ಒಪ್ಪಿ ಸಹಿ ಮಾಡಿರುತ್ತಾರೆ. ಮತ್ತು ತಾವು ಪಡೆದುಕೊಂಡ ಸಾಲವನ್ನು ನಿಗದಿತ ಅವಧಿಯೊಳಗಾಗಿ ಅಸಲು ಮತ್ತು ಬಡ್ಡಿ ಸಹಿತ ಮರುಪಾವತಿಸುವುದಾಗಿ ಒಪ್ಪಿ ಬ್ಯಾಂಕಿನ ಷರತ್ತು ಮತ್ತು ಕರಾರು ಪತ್ರಗಳಿಗೆ ಸಹಿ ಮಾಡಿರುತ್ತಾರೆ.

ಈ ಸಾಲವನ್ನು ಸಕಾಲದಲ್ಲಿ ಮರುಪಾವತಿ ಮಾಡದೇ ಸುಸ್ತಿದಾರರಾದ ಪ್ರಯುಕ್ತ ಸಾಲ ಮರುಪಾವತಿ ಮಾಡಲು ಬ್ಯಾಂಕಿನವರು ತಿಳುವಳಿಕೆ ನೀಡಿರುತ್ತಾರೆ. ಆದರೂ ಸಹಾ ಸಾಲ ವಸೂಲು ಆಗದೇ ಇದ್ದ ಪ್ರಯುಕ್ತ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿಯಲ್ಲಿ ಮಾನ್ಯ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ ದಾವಾ ದಾಖಲು ಮಾಡಿರುತ್ತಾರೆ. ದಾವಾ ಸಂಖ್ಯೆ: (1) 124:02-03 ತೀರ್ಪು ದಿನಾಂಕ:19.08.02 (2) 125:02-03 ತೀರ್ಪು ದಿನಾಂಕ:16.08.02 (3) 126:02-03 ತೀರ್ಪು ದಿನಾಂಕ:16.8.02 (4) 128:02-03 ತೀರ್ಪು ದಿನಾಂಕ:16.08.02 ಇದ್ದು ಇವುಗಳ ತೀರ್ಪಿನ (ಡಿಕ್ರಿಯ) ಪ್ರತಿಗಳನ್ನು ಅರ್ಜಿದಾರರು ಪಡೆದುಕೊಂಡಿರುತ್ತಾರೆ.

ಡಿಕ್ರಿಯನ್ನು ಪಡೆದ ನಂತರವೂ ಸಹಾ ಡಿಕ್ರಿದಾರರು, ಎಷ್ಟೇ ತಗಾದೆ ಮಾಡಿದರೂ ಸಹಾ ಡಿಕ್ರಿ ಬಾಕಿದಾರರು ಡಿಕ್ರಿ ಮೊಬಲಗನ್ನು ಅರ್ಜಿದಾರರ ಬ್ಯಾಂಕಿಗೆ ಮರು ಪಾವತಿಸದೇ ಇದ್ದ ಕಾರಣ ಮುಂದಿನ ಕಾನೂನು ಕ್ರಮ ಜರುಗಿಸಲು ಬ್ಯಾಂಕಿನ ಮ್ಯಾನೇಜರ್ ರವರು ದಿನಾಂಕ:08.02.03 ರಂದು ಅಮಲ್ಜಾರಿ ಅರ್ಜಿಗಳನ್ನು ತಯಾರಿಸಿ ದಾಖಲಾತಿ ಸಲುವಾಗಿ ಈ ಕಛೇರಿಗೆ ಸಲ್ಲಿಸಿರುವರು. ಸದ್ರಿ ಅಮಲ್ಜಾರಿ ಕಡತಗಳನ್ನು ಪರಿಶೀಲಿಸಿ ಈ ಕಛೇರಿಯಲ್ಲಿ ದಾಖಲಿಸಿಕೊಂಡು (1) 509:2002-03 ದಿನಾಂಕ:11.02.2003 (2) 510:2002-03 ದಿನಾಂಕ:11.02.2003 (3) 511:02-03 ದಿನಾಂಕ:11.02.2003 (4) 512:2002-03 ದಿನಾಂಕ:11.02.2003, ಇದ್ದು ಈ ನಾಲ್ಕು ಪ್ರಕರಣಗಳಲ್ಲಿ ಮುಂದಿನ ಕಾನೂನು ಕ್ರಮ ಜರುಗಿಸಲು ಲೆಕ್ಕಿಗರು ಹಾಗೂ ಮಾರಾಟಾಧಿಕಾರಿಗಳು, ದಿ. ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇವರಿಗೆ ವಹಿಸಿಕೊಡಲಾಗಿದೆ.

ಸದ್ರಿ ಮಾರಾಟಾಧಿಕಾರಿಗಳು ಈ ನಾಲ್ಕು ಪ್ರಕರಣಗಳಲ್ಲಿ ಕಾನೂನುಕ್ರಮ ಜರುಗಿಸಿ ಡಿಕ್ರಿ ಬಾಕಿದಾರರ (ನಾಲ್ಕು ಪ್ರಕರಣಗಳು ಒಂದೇ ಕುಟುಂಬದ ಸಾಲ ಆಗಿರುವುದರಿಂದ ಕ್ರೋಢೀಕರಿಸಿಕೊಂಡು) ಸ್ಥಿರಾಸ್ತಿಗಳನ್ನು ಬಹಿರಂಗ ಹರಾಜಿಗೆ ಗುರಿಪಡಿಸಲು ದಿನಾಂಕ:26.06.03 ರಂದು ಹರಾಜು ದಿನಾಂಕ ನಿಗದಿಪಡಿಸಿಕೊಡುವಂತೆ ಕೋರಿ ಈ ಕಛೇರಿಗೆ ಅಮಲ್ಜಾರಿ ಕಡತಗಳನ್ನು ಸಲ್ಲಿಸಿರುತ್ತಾರೆ. ಸದರಿ ಕಡತಗಳನ್ನು ಪರಿಶೀಲಿಸಿ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಲು ಹರಾಜು ದಿನಾಂಕವನ್ನು 08.08.2003ರಂದು ಹಗಲು 12.00 ಘಂಟೆಗೆ ನಿಗದಿಪಡಿಸಿ ನಮೂನೆ 8 ಮತ್ತು 9ಗಳಿಗೆ ಸಹಿ ಮಾಡಿಕೊಡಲಾಗಿದೆ. ನಮೂನೆ-8 ಮತ್ತು 9ಗಳನ್ನು ಸಂಬಂಧಿಸಿದ ಕಛೇರಿಗಳಿಗೆ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 125 ನಿಯಮಗಳು 1960 ನಿಯಮ 32ರ ಮೇರೆಗೆ ಡಿಕ್ರಿ ಬಾಕಿದಾರರಿಗೆ (ಡಿಕ್ರಿಬಾಕಿದಾರರು ಊರಲ್ಲಿ ಇಲ್ಲದ ಪ್ರಯುಕ್ತ ಅವರ ಹತ್ತಿರದ ಸಂಬಂಧಿಕರಿಗೆ) ಜಾರಿ ಮಾಡುವಲ್ಲಿ ಕ್ರಮಕೈಗೊಳ್ಳಲಾಗಿದೆ. ಹಾಗೂ ಜಾರಿ ಕ್ರಮಬದ್ಧವಾಗಿದೆ.

ದಿನಾಂಕ:08.08.2003 ರಂದು ಡಿಕ್ರಿಬಾಕಿದಾರರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಲು ಮಾರಾಟಾಧಿಕಾರಿಗಳು ಕ್ರಮ ಕೈಗೊಂಡಿರುತ್ತಾರೆ. ದಿನಾಂಕ:08.08.03ರ ಹರಾಜು ನಡವಳಿಕೆ ಪ್ರಕಾರ 6 ಜನ ಬಿಡ್ಡುದಾರರು (ಹರಾಜುದಾರರು) ಭಾಗವಹಿಸಿರುತ್ತಾರೆ. ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಜೆ.ಕೆ. ಸುರೇಶ್‌ಕುಮಾರ್ ಬಿನ್ ಕುಂದನ್‌ಮಲ್‌ಜಿ ಮಂಡಿಪೇಟೆ, ಶಿಕಾರಿಪುರ ಇವರು ರೂ.342000-00ಗಳಿಗೆ ಬಿಡ್ಡು ಮಾಡಿರುತ್ತಾರೆ. ಮಾರಾಟಾಧಿಕಾರಿಗಳು ಅವರ ಹೆಸರಿಗೆ ಬಿಡ್ಡು ನಿಲ್ಲಿಸಿರುತ್ತಾರೆ. ನಂತರದಲ್ಲಿ ಕಾನೂನು ರೀತ್ಯಾ ಎಲ್ಲಾ ಪ್ರಕ್ರಿಯೆ ಮುಗಿದ ನಂತರ ಶ್ರೀ ಜೆ.ಕೆ. ಸುರೇಶ್‌ಕುಮಾರ್ ಬಿನ್ ಕುಂದನ್‌ಮಲ್‌ಜಿ, ಮಂಡಿಪೇಟೆ, ಶಿಕಾರಿಪುರ ಇವರ ಹೆಸರಿಗೆ ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ ಪತ್ರವನ್ನು ನೀಡಲು ಉಲ್ಲೇಖ (3)ರ ಪತ್ರದ ಮೂಲಕ ಮಾರಾಟಾಧಿಕಾರಿಗಳು ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ(3)ರ ಪತ್ರದ ಮೂಲಕ ಬಂದಿರುವ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಹಾಗೂ ಈ ಕೆಳಕಂಡಂತೆ ಮಾರಾಟ ಸ್ಥಿರೀಕರಣ ಆದೇಶ ನೀಡಿದೆ.

**ಸ್ಥಿರಾಸ್ತಿ ಮಾರಾಟ ಸ್ಥಿರೀಕರಣ ಆದೇಶ**

**ಕ್ರ.ಸಂ. ಸಸಂಸನಿ-25:ಅಮಲ್ಜಾರಿ:ಸಿಆರ್-123:03-04/4442, ದಿನಾಂಕ:21ನೇ ಜನವರಿ, 2004**

ಶ್ರೀ ಜಿ.ವಿ. ಬಸವರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960 ನಿಯಮ 38(7)ರ ಮೇರೆಗೆ ದತ್ತವಾದ ಹಾಗೂ ಕರ್ನಾಟಕ ರಾಜ್ಯ ಸರ್ಕಾರ ಸಹಕಾರ ಇಲಾಖೆ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:01 ಬೆಂಗಳೂರು ದಿನಾಂಕ:21.11.01ರ ಮೇರೆಗೆ ನೀಡಲಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ (ತಾ), ಶಿಕಾರಿಪುರ ಟೌನ್ ಪುರಸಭೆ ವ್ಯಾಪ್ತಿಯ ಮಂಡಿಕೇರಿ ದಕ್ಷಿಣ ಭಾಗದ ಅಸೆಸ್‌ಮೆಂಟ್ ನಂ. 67:67 (ಹಳೇ ನಂ. 61:61)ರ 15x112+105/2ರ ಅಡಿ ವಿಸ್ತೀರ್ಣದ ನಿವೇಶನ ಹಾಗೂ ಇದರಲ್ಲಿರುವ 15x11 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿ ಮನೆ, 15x33 ಅಡಿ ವಿಸ್ತೀರ್ಣದ ಮಂ.ಹೆಂ. ಮಹಡಿ ಮನೆ, 15x41 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿಮನೆ, 15x16 ಅಡಿ ವಿಸ್ತೀರ್ಣದ ಮಂ.ಹೆಂ. ಮಹಡಿಮನೆ, 15x10 ಅಡಿ ವಿಸ್ತೀರ್ಣದ ಮಹಡಿ ಇಲ್ಲದ ಮನೆ (ಹಿಂಭಾಗದಲ್ಲಿ) ಇದಕ್ಕೆ ಚೆಕ್ಕು ಬಂದಿ: ಪೂರ್ವಕ್ಕೆ- ಶ್ರೀ ರುದ್ರಶಾಸ್ತ್ರಿಯವರ ಬಂಜರುಜಾಗ, ಪಶ್ಚಿಮಕ್ಕೆ-ಕಂಪೌಂಡರ್ ದೇವಪ್ಪನವರ ಮನೆ, ಉತ್ತರಕ್ಕೆ-ಹೊನ್ನಾಳಿ ರಸ್ತೆ, ದಕ್ಷಿಣಕ್ಕೆ-ತೆಲುಗರ ಗೌರಮ್ಮನವರ ಬಂಜರು ಜಾಗ ಮತ್ತು ಚಿಟ್ಟೂರು ಮರುಳಪ್ಪನವರ ಮತ್ತು ಸಿದ್ದಪ್ಪನವರ ಹಿತ್ತಲ ಬೇಲಿ, ಈ ಮಧ್ಯದಲ್ಲಿ ಇರುವ ಸ್ಥಿರಾಸ್ತಿಯನ್ನು ಡಿಕ್ರಿದಾರರಾದ, ಮೇನೇಜರ್ ದಿ.ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇವರು ಡಿಕ್ರಿಬಾಕಿದಾರರಿಂದ ಬರಬೇಕಾದ ಡಿಕ್ರಿ ಮೊಬಲಗಿಗೆ ದಿನಾಂಕ:08.08.03 ರಂದು ಮಾರಾಟಾಧಿಕಾರಿಗಳ ಮೂಲಕ ಬಹಿರಂಗ ಹರಾಜು ಮಾಡಿಸಿದ್ದು, ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಜೆ.ಕೆ. ಸುರೇಶ್‌ಕುಮಾರ್ ಬಿನ್ ಕುಂದನ್‌ಮಲ್‌ಜಿ, ಮಂಡಿಪೇಟೆ, ಶಿಕಾರಿಪುರ ಇವರ ಹೆಸರಿಗೆ ಮಾರಾಟ ಸ್ಥಿರೀಕರಣ ಆದೇಶ ಪತ್ರವನ್ನು ನೀಡಿರುತ್ತೇನೆ. ಮಾರಾಟದ ಮೊಬಲಗು ರೂ. 342000-00ಗಳು ಇರುತ್ತದೆ. ಮತ್ತು ಈ ಆದೇಶಕ್ಕೆ ಲಗತ್ತಿಸಿರುವ ನಿಗದಿತ ನಮೂನೆ 10 ಮತ್ತು 11ನ್ನು ಈ ಸ್ಥಿರೀಕರಣ ಆದೇಶದ ಒಂದು ಮುಖ್ಯ ಭಾಗವಾಗಿರುತ್ತದೆ.

ಛಾಪಾ ಕಾಗದ ಖರೀದಿಸಿ ಲಗತ್ತಿಸುವ ಕುರಿತಂತೆ ಮಾನ್ಯ ಕರ್ನಾಟಕ ಸರ್ಕಾರ ನೊಂದಣಿ ಮತ್ತು ಮುದ್ರಾಂಕಗಳ ಇಲಾಖೆಯ ನೊಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಹೊರಡಿಸಿರುವ ಸುತ್ತೋಲೆ ಸಂಖ್ಯೆ:ಎಸ್‌ಡಿಪಿ:87:93-94 ದಿನಾಂಕ:16.08.99ರ ಸುತ್ತೋಲೆಯಲ್ಲಿರುವ ಸ್ಪಷ್ಟೀಕರಣದ ಅನ್ವಯ ಮತ್ತು ಕರ್ನಾಟಕ ನೊಂದಣಿ ಕಾಯ್ದೆ ಸಂ:09.2003 ದಿನಾಂಕ:31.03.2003ರ ಪ್ರಕಾರ ಛಾಪಾ ಕಾಗದವನ್ನು ಪಡೆದಿರುವುದಿಲ್ಲ ಹಾಗೂ ಅನ್ವಯವಾಗುವ ಶುಲ್ಕವನ್ನು ನೇರವಾಗಿ ಸರ್ಕಾರಕ್ಕೆ ತುಂಬಲು ಸೂಚಿಸಿದೆ.

ನನ್ನ ಸಹಿ ಮತ್ತು ಕಾರ್ಯಾಲಯದ ದುಂಡು ಮುದ್ರೆಯೊಂದಿಗೆ ದಿನಾಂಕ:21.01.2004ರಂದು ಈ ಆದೇಶ ನೀಡಿರುತ್ತೇನೆ.

**ಜಿ.ವಿ. ಬಸವರಾಜು**
ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾತಿ ಅಧಿಕಾರಿಗಳು,
ಸಾಗರ ಉಪವಿಭಾಗ, ಸಾಗರ.

**ASSISTANT REGISTRAR OF CO-OPERATIVE SOCIETIES SAGAR SUB DIVISION, SAGAR, SHIMOGA DISTRICT**

**FORM No.10**

**CERTIFICATE OF SALE ISSUED UNDER SUB RULE (7) OF RULE 38 OF THE RULES FRAMED UNDER THE KARNATAKA CO-OPERATIVE SOCIETIES ACT OF 1959**

**Name:** G.V. Basavraju S/o Venkatappa

**EXECUTION PETITION No.** 1) 509/2002-03 dated:11.02.2003
2) 510/2002-03 dated: 11.02.2003
3) 511/2002-03 dated: 11.02.2003
4) 512/2002-03 dated: 11.02.2003

**Decree Holder:** Manager
The Urban Co-operative Bank Ltd.,
Shikaripura.

**V/s**

**Defaulter:**
1. Sri J.B. Padam Kumar
S/o Sha Bhavaralal
2. Smt. Champa Bai W/o Sha Bhavaralal
3. Smt. Sumitha Gadiga W/o J.B. Padam Kumar
4. Sri J.B. Padam Kumar S/o Sha Bhavarlal

This is to cerity that Sri J.K. Suresh Kumar S/o Kundanmalji, caste Jain, religion Hindu, cultivator (profession) residing in the village of Shikaripura Town, Mandipete, Shikaripura of Shikaripura Taluk in the Shimoga District has purchased at Mandikeri Shikaripura Town a public auction held by one of the sale officers of Urban Co-operative Bank, Shikaripura, District Shimoga the undermentioned immovable property sold for arrears due to manager. The Urban Co-operative Bank Ltd., Shikaripura by (1) Sri J.B. Padam Kumar S/o Sha Bhavarlal, (2) Smt Champa Bai W/o Sha Bhavarlal (3) Smt Sumitha Gadiga W/o J.B. Padam Kumar, (4) J.B. Padam Kumar son of Sha Bhavarlal, Mandikere, Shikaripura, caste: Jain religion Hindu, land-holder (profession) in the village of Mandikere, Shikaripura of Shikaripura Taluk in Shimoga District in execution of decree/award/decision/order No. 1) 124/02-03 dated: 19.08.03, (2) 125/02-03 dated:16.08.03, (3) 126/02-03 dated 16.08.03, (4) 128/02-03 dated: 16.08.03 on the file of the Deputy Registrar of Co-operative Societies Shimoga Dist., Shimoga and has paid the full amount of the purchase money, viz., Rs. 3,42,000 and that the sale has been duly confirmed by me on 21st day of January, 2004.

Assistant Registrar of
Co-operative Societies,
Sagar Sub-Division, Sagar.

**SCHEDULE OF PROPERTIES**

| | | |
|---|---|---|
| Registration District | : | Shimoga |
| Registration Sub-District | : | Sagar |
| Taluk | : | Shikaripura |
| Village | : | Shikaripura |
| Description of properties (Boundaries) | : | East: Site of Rudrashastry<br>West: House of compounder Devappa<br>North: Honnali Road<br>South: Site of Talugara Gowramma and Chittur Marulappa and Siddappa |
| Assessment No | : | 67/67 (Old No. 61/61) |
| Estimated extent Acs | : | 15'x112'+105'/2 site and including houses. |
| Assessment Rs | : | 1. 15'x11' R.C.C. upstair house.<br>2. 15' x 33' Mangalore tiles upstair house<br>3. 15' x 41' R.C.C. upstair house<br>4. 15' x 16' Mangalore tiles upstair house<br>5. 15' x 10' house |
| Sale price for each lot | : | Rs. 3,42,000/- |
| Date of sale 08.08.03 | | |

Given under my hand and seal this 21st day of January, 2004.

Station: Sagar,
Date:21.01.2004.

Assistant Registrar of
Co-operative Societies
Sagar Sub-Division, Sagar.

**ಫಾರಂ ನಂಬರ್ 11**

**38ನೆಯ ರೂಲಿನ (7)ನೆಯ ಕಾಲಂ**

**ಸ್ಥಿರಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ಶಿವಮೊಗ್ಗ ಜಿಲ್ಲಾ ಶಿಕಾರಿಪುರ ತಾಲ್ಲೂಕು ಮಂಡಿಕೇರಿ ಶಿಕಾರಿಪುರ ಗ್ರಾಮದಲ್ಲಿರುವ ಶ್ರೀ ಜೆ.ಕೆ. ಸುರೇಶ್‌ಕುಮಾರ್ ಬಿನ್ ಕುಂದನ್‌ಮಲ್‌ಜಿ. ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾದ ಹರಾಜಿನಲ್ಲಿ 2003ನೇ ಇಸವಿ ಆಗಸ್ಟ್ ತಿಂಗಳ 8ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾರಾಗಿಯೂ ಮತ್ತು ದರಖಾಸ್ತು ಹಣ ರೂ. 342000-00ನ್ನು ಸಂಪೂರ್ಣವಾಗಿ

ಪಾವತಿಮಾಡಿದ್ದಾರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ಜೆ.ಕೆ. ಸುರೇಶ್‌ಕುಮಾರ್ ಬಿನ್ ಕುಂದನ್‌ಮಲ್‌ಜಿ. ಮಂಡಿಪೇಟೆ, ಶಿಕಾರಿಪುರ ಇವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹ | | ಗದ್ದೆಗಳ ವಿವರ | | | | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|---|---|---|
| | | | ನಂ. | ಪೋಡು ನಂ. | ಖಾತೆದಾರನ ಹೆಸರು | | | |
| 1 | 2 | | 3 | 4 | 5 | | 6 | 7 |
| ಶಿಕಾರಿಪುರ ಮಂಡಿಕೇರಿ, ಶಿಕಾರಿಪುರ. | 1. | 15X11 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿ ಮನೆ. | ಅಸೆಸ್‌ಮೆಂಟ್ ನಂಬರ್ 67:67 (ಹಳೇ ನಂಬರ್ 61:61) | | 1. | ಶ್ರೀ ಜೆ.ಬಿ. ಪದಮ್ ಕುಮಾರ್ ಬಿನ್ ಷಾ ಭವರ್‌ಲಾಲ್. | $15^1X112^1X105^1/2$ | ದಿ. ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿಕಾರಿಪುರ ಇದರಲ್ಲಿ ಪಡೆದಿರುವ ಸಾಲದ ಬಾಬ್ತು ರೂ. 222000-00 ಮತ್ತು ಬಡ್ಡಿ, ಸುಸ್ತಿಬಡ್ಡಿ ಹಾಗೂ ಇತರೆ ಖರ್ಚುಗಳ ವಸೂಲಾತಿ ಸಲುವಾಗಿ. |
| | | | | | 2. | ಶ್ರೀಮತಿ ಚಂಪಾಬಾಯಿ ಕೋಂ ಷಾ ಭವರ್‌ಲಾಲ್. | | |
| | 2. | 15X33 ಅಡಿ ವಿಸ್ತೀರ್ಣದ ಮಂ.ಹೆಂ. ಮಹಡಿಮನೆ. | | | 3. | ಶ್ರೀ ಅಂಬಾಲಾಲ್ ಬಿನ್ ಷಾ ಭವರ್‌ಲಾಲ್ | | |
| | 3. | 15X41 ಅಡಿ ವಿಸ್ತೀರ್ಣದ ಆರ್‌ಸಿಸಿ ಮಹಡಿ ಮನೆ. | | | | | | |
| | 4. | 15X16 ಅಡಿ ವಿಸ್ತೀರ್ಣದ ಮಂ.ಹೆಂ. ಮಹಡಿ ಮನೆ. | | | | | | |
| | 5. | 15X10 ಅಡಿ ವಿಸ್ತೀರ್ಣದ ಮಹಡಿ ಇಲ್ಲದ ಮನೆ. | | | | | | |

ಮೊಕ್ಕಾಂ:ಸಾಗರ,
ತಾರೀಖು: 21.01.2004

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸಾಗರ ಉಪವಿಭಾಗ, ಸಾಗರ.

ಪಿ.ಆರ್.155

## ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರ ನಡವಳಿಕೆಗಳು

**ಉಪಸ್ಥಿತರು:** ಶ್ರೀ ಎಲ್. ಶ್ರೀನಿವಾಸಮೂರ್ತಿ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

**ವಿಷಯ:** ವಾಹನ ಸಂಖ್ಯೆ: KA-03/2911( LMV-GV) ಭಾರಿ ಸರಕು ಸಾಗಾಣಿಕೆ ವಾಹನದ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ವಾಹನ ಮಾಲೀಕರ ಅರ್ಜಿ ದಿನಾಂಕ:28.10.2003.
2. ವಾಹನ ನಿರೀಕ್ಷಕರ ವರದಿ ದಿನಾಂಕ:22.11.2003.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ:KA-03/2911( LMV-GV) ಭಾರಿ ಸರಕು ಸಾಗಾಣಿಕೆ ವಾಹನದ ಮಾಲೀಕರು ವಾಹನದ ತೆರಿಗೆಯನ್ನು ಅವಧಿ 30.11.2003 ವರೆಗೆ ಪಾವತಿಸಿ ವಾಹನವು ತುಕ್ಕುಹಿಡಿದು ಹಾಳಾಗಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿ ಎಂಬ ಕಾರಣ ನೀಡಿ ನೊಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ:22.11.2003ರಲ್ಲಿ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ, ಸದರಿ ವಾಹನದ ಮೇಲೆ ತೆರಿಗೆ ಬಾಕಿ, ಲೆಕ್ಕ ಪತ್ರ ತನಿಖಾ ಆಕ್ಷೇಪಣೆ ಅಥವಾ ಡಿ.ಎಸ್.ಎ. ಪ್ರಕರಣಗಳು ಏನಾದರೂ ಬಾಕಿಯಿರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ:22.11.2003 ರಿಂದ ಅನ್ವಯವಾಗುವಂತೆ ನೊಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ

**ಸಂಖ್ಯೆ:ಪ್ರಾಸಾಅ:ಬಳ್ಳಾರಿ:ನೊಂದಣಿ:KA-03/2911:03-04 ದಿನಾಂಕ:22ನೇ ನವೆಂಬರ್, 2003**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೊಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ:KA-03/2911(LGV) ಭಾರಿ ಸರಕು ಸಾಗಾಣಿಕೆ ವಾಹನದ ನೊಂದಣಿಯನ್ನು ದಿನಾಂಕ:22.11.2003 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೊಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು**

| | | | |
|---|---|---|---|
| 1. | ನೊಂದಣಿ ಸಂಖ್ಯೆ | : | KA 03/2911. |
| 2. | ವಾಹನದ ವರ್ಗ | : | L.G.V. |
| 3. | ತಯಾರಕರ ಹೆಸರು | : | Mahindra & Mahindra. |
| 4. | ಅಡಿಗಟ್ಟು ಸಂಖ್ಯೆ | : | 4S 72182. |
| 5. | ಯಂತ್ರದ ಸಂಖ್ಯೆ | : | 4S 72182. |
| 6. | ಮಾಲೀಕರ ಹೆಸರು-ವಿಳಾಸ | : | Manager, M/s Tyre Soles Bangalore, Ananthapur Road, Bellary. |

ನೋಂದಣಿ ಪ್ರಾಧಿಕಾರ ಹಾಗೂ
ಪಿ.ಆರ್.156 ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರ ನಡವಳಿಗಳು**

**ಉಪಸ್ಥಿತರು:** ಶ್ರೀ ಎಲ್. ಶ್ರೀನಿವಾಸಮೂರ್ತಿ,

**ವಿಷಯ:** ವಾಹನ ಸಂಖ್ಯೆ: ಕೆಎ-34:1768 ಮ್ಯಾಕ್ಸಿಕ್ಯಾಬ್ ನೋಂದಣಿ ರದ್ಧತಿ ಕುರಿತು.

**ಉಲ್ಲೇಖ:** 1. ಹರಾಜುದಾರರ ಅರ್ಜಿ ದಿನಾಂಕ:19.12.03.

**ಪ್ರಸ್ತಾವನೆ:**

ಸದರಿ ವಾಹನ ಸಂಖ್ಯೆ: ಕೆಎ-34:1768 ಮ್ಯಾಕ್ಸಿಕ್ಯಾಬ್ ಶ್ರೀ ಎನ್. ಸುರೇಶ್‌ನಾಯ್ಕು, ತಂದೆ ಹರಿಶ್ಚಂದ್ರ, ನಂ.137 ಟಿ.ಬಿ. ಹಾಸ್ಪಿಟಲ್ ಹತ್ತಿರ ಬಳ್ಳಾರಿ ಇವರ ಹೆಸರಿನಲ್ಲಿದ್ದು, ದಿನಾಂಕ: 01.08.1998 ರಿಂದ ತೆರಿಗೆ ಪಾವತಿಸಿಲ್ಲದ ಕಾರಣ ದಿನಾಂಕ:11.03.1999ರಂದು ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ವಾಹನ ಮಾಲೀಕರಿಗೆ ಹಾಗೂ ವಾಹನ ಹಣಕಾಸಿನವರಿಗೆ 10.03.1999, 17.04.1999 ರಂದು ತೆರಿಗೆ ಪಾವತಿ ಮಾಡಲು ನೋಟಿಸ್ ನೀಡಿದರೂ ವಾಹನದ ತೆರಿಗೆ ಪಾವತಿಸದೆ ಇದ್ದರಿಂದ ದಿನಾಂಕ:09.12.2003ರಂದು ವಾಹನವನ್ನು ಬಹಿರಂಗ ಹರಾಜು ಮಾಡಲಾಯಿತು. ಹರಾಜಿನಲ್ಲಿದ್ದ ಶ್ರೀ ಹೆಚ್. ನಿಸ್ಸಾರ್ ತಂದೆ ರಹೀಂ ಸಾಬ್, ಕೊಲ್ಮಿ ಬಜಾರ್, ಬಳ್ಳಾರಿ ಇವರು ವಾಹನ ಖರೀದಿಸಿ, ವಾಹನದ ನೋಂದಣಿ ರದ್ದು ಪಡಿಸಲು ಉಲ್ಲೇಖದ ಪ್ರಕಾರ ಕೋರಿದ್ದಾರೆ. ವಾಹನವು 1999ರಲ್ಲಿ ಮುಟ್ಟುಗೋಲು ಹಾಕಿಕೊಂಡಿದ್ದು, ಅನುಪಸ್ಥಿತಿಯಲ್ಲಿ ಹಾಳಾಗಿದ್ದರಿಂದ ಮೇಲಿನ ಅಂಶಗಳನ್ನು ಪರಿಗಣಿಸಿ ಸದರಿ ವಾಹನದ ಮೇಲೆ ಏನಾದರೂ ತೆರಿಗೆ ಬಾಕಿ ಡಿಎಸ್‌ಎ ಕೇಸು, ಹಾಗೂ ಆಡಿಟ್ ಬಾಕಿ ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಖರೀದಿದಾರರು ಪಾವತಿಸಬೇಕೆಂದು ವಾಹನದ ಹಣಕಾಸಿನವರ ಒಪ್ಪಂದಕ್ಕೆ ವಾಹನ ಮಾಲಿಕರೇ ಬಾಧ್ಯಸ್ಥರಾಗಿದ್ದಾರೆ, ಎಂಬ ನಿಬಂಧನೆಯೊಂದಿಗೆ ದಿನಾಂಕ:08.01.2004 ರಂದು ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಅ:ಬ:ನೋಂದಣಿ:ಕೆಎ-34:1768:03-04, ದಿನಾಂಕ:8ನೇ ಜನವರಿ, 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಷ್ಟು ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ ಬಳ್ಳಾರಿ ಆದ ನಾನು ವಾಹನ ಸಂಖ್ಯೆ:ಕೆಎ-34:1768ರ ನೋಂದಣಿಯನ್ನು 08.01.2004 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸಲಾಗಿದೆ.

**ವಾಹನದ ವಿವರಣೆ**

| | | | |
|---|---|---|---|
| 1. | ವಾಹನ ಸಂಖ್ಯೆ | : | ಕೆಎ-34:1768 |
| 2. | ವರ್ಗ | : | ಮ್ಯಾಕ್ಸಿಕ್ಯಾಬ್ |
| 3. | ಅಡಿಗಟ್ಟು ಸಂಖ್ಯೆ | : | 616 ಎಫ್‌ಡಿ 736383 ಇ 94. |
| 4. | ಯಂತ್ರದ ಸಂಖ್ಯೆ | : | 616 969 096917. |
| 5. | ತಯಾರಕರು | : | ಬಜಾಜ್ ಟೆಂಪೊ ಲಿ. |
| 6. | ಮಾದರಿ | : | 1994 |

ನೋಂದಣಿ ಪ್ರಾಧಿಕಾರ ಹಾಗೂ
ಪಿ.ಆರ್.157 ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರ ನಡವಳಿಗಳು**

**ಉಪಸ್ಥಿತರು:** ಶ್ರೀ ಎಲ್. ಶ್ರೀನಿವಾಸಮೂರ್ತಿ,

**ವಿಷಯ:** ವಾಹನ ಸಂಖ್ಯೆ: ಸಿಕೆಕೆ-6273 ಒಬಿ ವಾಹನ ನೋಂದಣಿ ರದ್ದು ಪಡಿಸುವ ಬಗ್ಗೆ.

**ಉಲ್ಲೇಖ:** 1. ಹರಾಜುದಾರರ ಅರ್ಜಿ ದಿನಾಂಕ:18.12.03.

2. ಪ್ರಾಸಾಅ, ಬಳ್ಳಾರಿ ವರದಿ ದಿನಾಂಕ:22.12.03.

**ಪ್ರಸ್ತಾವನೆ:** ಮೋಟಾರು ವಾಹನ ಸಂಖ್ಯೆ: ಸಿಕೆಕೆ-6273, ಒಬಿ

ಸದರಿ ವಾಹನ ಕೆ. ಇಬ್ರಹಿಂ, ಮಿಲ್ಲರ್‌ಪೇಟೆ, ಬಳ್ಳಾರಿ; ಇವರ ಹೆಸರಲ್ಲಿದ್ದು ದಿನಾಂಕ:01.11.1998 ರಿಂದ ತೆರಿಗೆ ಪಾವತಿಸಿಲ್ಲದ ಕಾರಣ ದಿನಾಂಕ:11.02.1999 ರಂದು ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಮಾಲೀಕರು ತೆರಿಗೆ ಪಾವತಿಮಾಡಿ

ವಾಹನವನ್ನು ಬಿಡಿಸಿಕೊಳ್ಳದ ಪ್ರಯುಕ್ತ ದಿನಾಂಕ: 09.12.2003 ರಂದು ವಾಹನವನ್ನು ಬಹಿರಂಗ ಹರಾಜು ಮಾಡಲಾಯಿತು. ಹರಾಜಿನಲ್ಲಿ ಶ್ರೀ ನಿಸಾರ್‌ಅಹಮದ್, ತಂದೆ: ರಹೀಂ ಸಾಬ್, ಕೊಲಿಮಿ ಬಜಾರ್, ಬಳ್ಳಾರಿ. ಇವರು ದಿನಾಂಕ:01.11.1998 ರಿಂದ 30.04.1999 ರ ವರೆಗೆ ತೆರಿಗೆ ಪಾವತಿ ಮಾಡಿ ವಾಹನವನ್ನು ಖರೀದಿಸಿ, ದಿನಾಂಕ:18.12.2003 ರಂದು, ನೋಂದಣಿ ರದ್ದು ಮಾಡಲು ಅರ್ಜಿ ಸಲ್ಲಿಸಲಾಯಿತು. ಅದಕ್ಕೆ ಪೂರ್ವಕವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರು ವಾಹನ ರಸ್ತೆ ಮೇಲೆ ಚಲಿಸುವ ಸ್ಥಿತಿಯಲ್ಲಿಲ್ಲವೆಂದು ನೋಂದಣಿ ರದ್ದು ಪಡಿಸಿದ್ದು ದಿನಾಂಕ:22.12.2003 ರಂದು ಆದೇಶ ನೀಡಿರುತ್ತಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ ಸದರಿ ವಾಹನದ ಮೇಲೆ ತೆರಿಗೆ ಬಾಕಿ ಲೆಕ್ಕ ಪತ್ರ ತನಿಖಾ ಆಕ್ಷೇಪಣೆ ಅಥವಾ ಡಿ.ಎಸ್.ಎ. ಪ್ರಕರಣಗಳು ಏನಾದರೂ ಬಾಕಿ ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಖರೀದಿದಾರರಿಗೆ ಪಾವತಿಸಬೇಕೆಂದು ನಿಬಂಧನೆಯೊಂದಿಗೆ ದಿನಾಂಕ:22.12.2003 ರಿಂದ ಅನ್ವಯವಾಗುವಂತೆ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ:ಪ್ರಾಸಾಅ:ಬಳ್ಳಾರಿ:ನೋಂದಣಿ:ಸಿಕೆಕೆ-6273:03-04, ದಿನಾಂಕ:22ನೇ ಡಿಸೆಂಬರ್, 2003**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ: ಸಿಕೆಕೆ-6273, ಒಜಿ, ನೋಂದಣಿಯನ್ನು ದಿನಾಂಕ:22.12.2003 ರಿಂದ ಅನ್ವಯವಾಗುವಂತೆ ಸದರಿ ವಾಹನದ ಮೇಲೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಹರಾಜುದಾರರಿಗೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ನೋಂದಣಿಯನ್ನು ರದ್ದುಪಡಿಸಲಾಗಿದೆ.

1. ನೋಂದಣಿ ಸಂಖ್ಯೆ: : ಸಿಕೆಕೆ-6273
2. ವಾಹನದ ವರ್ಗ : ಒಬಿ
3. ತಯಾರಕರ ಹೆಸರು : ಬಜಾಜ್ ಟೆಂಪೊ.
4. ಅಡಿಗಟ್ಟು ಸಂಖ್ಯೆ : 616 ಎಫ್‌ಡಿ 319272.
5. ಯಂತ್ರದ ಸಂಖ್ಯೆ : 616 969 025334.
6. ಮಾಲಿಕರ ಹೆಸರು : ಶ್ರೀ ನಿಸಾರ್ ಅಹ್ಮದ್,
   ವಿಳಾಸ ತಂದೆ: ರಹೀಂ ಸಾಬ್, ಕೊಲಮಿ ಬಜಾರ್, ಬಳ್ಳಾರಿ.

ನೋಂದಣಿ ಪ್ರಾಧಿಕಾರ ಹಾಗೂ
ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

ಪಿ.ಆರ್.158

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಪ್ರಾರಂಭಿಕ ಅಧಿಸೂಚನೆ**

**ನಂ. ಎಂಯುಎನ್. ಸಿಆರ್ 299/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ಕೋಲಾರ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ವೀರಾಂಜನೇಯ ನಗರ, 2ನೇ ಹಂತ | ನಗರಸಭೆ ಕೋಲಾರ | 04ರ ಪೈಕಿ | 0-35 | ಸ್ಮಶಾನ | ಶಾಂತಿನಗರ | ಶಾಂತಿನಗರ | ರಸ್ತೆ |

ಬಿ.ಎಸ್. ರಾಮಪ್ರಸಾದ್
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

ಪಿ.ಆರ್.159

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಪ್ರಾರಂಭಿಕ ಅಧಿಸೂಚನೆ

**ನಂ. ಎಂಯುಎನ್. ಸಿಆರ್ 300/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ಕೋಲಾರ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ವೀರಾಂಜನೇಯ ನಗರ. | ನಗರಸಭೆ ಕೋಲಾರ | 02ರ ಪೈಕಿ | 3-20 | ರಸ್ತೆ | ಸ್ಮಶಾನ | ರಸ್ತೆ | ಸ್ಮಶಾನ ಚಾಮುಂಡಿನಗರ |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ.

ಪಿ.ಆರ್.160

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಪ್ರಾರಂಭಿಕ ಅಧಿಸೂಚನೆ

**ನಂ. ಎಂಯುಎನ್. ಸಿಆರ್ 308/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ರಾಬರ್ಟ್‌ಸನ್‌ಪೇಟೆ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಸೂಸೈಪಾಳ್ಯಂ ಕೊಳಚೆ ಪ್ರದೇಶ | ನಗರಸಭೆ ರಾಬರ್ಟ್ ಸನ್‌ಪೇಟೆ | ಪಿ.ಟಿ.ಎಸ್. ನಂ.56 ಖಾತೆ ನಂ.592:476, 606, 654, 663ಮತ್ತು ಇತರೆ | 5-20 | ದಾಸಚಿನ್ನ ಸೌರಿ ತೋಟ ಹಾಗೂ ಖಾಸಗಿ ಸ್ವತ್ತು | ಫಾದರ್ ಜಾರ್ಜ್ ರಸ್ತೆ | ರಸ್ತೆ ಹಾಗೂ ಅಮರನಾಥ ಮನೆ | ಕೆ.ಜಿ.ಎಫ್. ಕುಪ್ಪಂ ರಸ್ತೆ |

**ಬಿ.ಎಸ್. ರಾಮಪ್ರಸಾದ್**

ಪಿ.ಆರ್.161 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಪ್ರಾರಂಭಿಕ ಅಧಿಸೂಚನೆ**

**ನಂ. ಎಂಯುಎನ್. ಸಿಆರ್ 307/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ರಾಬರ್ಟ್‌ಸನ್‌ಪೇಟೆ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣೆಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಗೋಣಮಾಕನ ಹಳ್ಳಿ ಕೊಳಚೆ ಪ್ರದೇಶ | ನಗರಸಭೆ ರಾಬರ್ಟ್ ಸನ್‌ಪೇಟೆ | 1156 1158 1171 ಮತ್ತು ಇತರೆ | 2-34 | ಸೂರಳ್ಳಿ ಕೆರೆ | ಬಾಣಗಿರಿ ಕೆಜಿಎಫ್ ರಸ್ತೆ | ಕೋದಂಡ ರೆಡ್ಡಿ ಜಯರಾಂ ರವರ ಖಾಸಗಿ ಜಮೀನು | ಶ್ರೀರಾಮ ದೇವಸ್ಥಾನ ಗೋಪಾಲ ಗೌಡರ ಮನೆ ಹಾಗೂ ಸರ್ಕಾರಿ ಹೈಸ್ಕೂಲ್ ಸ್ವತ್ತು |

**ಬಿ.ಎಸ್. ರಾಮಪ್ರಸಾದ್**

ಪಿ.ಆರ್.162 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಪ್ರಾರಂಭಿಕ ಅಧಿಸೂಚನೆ**

**ನಂ. ಎಂಯುಎನ್. ಸಿಆರ್ 306/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ರಾಬರ್ಟ್‌ಸನ್‌ಪೇಟೆ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ

ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಸ್ವರ್ಣಕುಪ್ಪಂ ಕೊಳಚೆ ಪ್ರದೇಶ | ನಗರಸಭೆ ರಾಬರ್ಟ್ ಸನ್‌ಪೇಟೆ | 1920:53 ಮತ್ತು ಇತರೆ | 0-20 | ನ್ಯೂ ಸ್ವರ್ಣ ಕುಪ್ಪಂ ಗಡಿ | ನಾರಾಯಣಪ್ಪನ ತೋಟ ಮತ್ತು ಮನೆ | ನಾರಾಯಣಪ್ಪನ ತೋಟ | ರಸ್ತೆ ಮತ್ತು ಸಾಕಮ್ಮ ಕಾಂಪೌಂಡ್ |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

ಪಿ.ಆರ್.163

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಪ್ರಾರಂಭಿಕ ಅಧಿಸೂಚನೆ

**ನಂ. ಎಂಯುಎನ್. ಸಿಆರ್ 305/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ಕೆ.ಜಿ.ಎಫ್. ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಕೃಷ್ಣಗಿರಿ ಲೈನ್ಸ್ ಕೊಳಚೆ ಪ್ರದೇಶ | ನಗರಸಭೆ ರಾಬರ್ಟ್ ಸನ್‌ಪೇಟೆ ಕೆ.ಜಿ.ಎಫ್. | ಸಿಬಿಎನ್ ನಂ.79 ಖಾತೆ ನಂ. 832, 982, 999, 1409:507, 1106, 1117: 1656, 1555 ಮತ್ತು ಇತರೆ | 2-30 | ಕೆಜಿಎಫ್ ಕುಪ್ಪಂ ರಸ್ತೆ | ಆನಂದ ರಾಜ್ ಸಾಗರ ಹಾಗೂ ಮೋಹನ್ ರವರ ಮನೆ | ಮುತ್ತು ಮಾರಿಯಮ್ಮ ದೇ. ಖಾಸಗಿ ಸ್ವತ್ತು ಹಾಗೂ ನಾಗರಾಜ್ ಮನೆ | ರಸ್ತೆ ಮತ್ತು ಮೈನ್ಸ್ ಸ್ವತ್ತು ಹಾಗೂ ಕೊಳಂದ ಏಸು ದೇವಸ್ಥಾನ |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

ಪಿ.ಆರ್.164

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಪ್ರಾರಂಭಿಕ ಅಧಿಸೂಚನೆ

**ನಂ. ಎಂಯುಎನ್. ಸಿಆರ್ 298/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ಕೋಲಾರ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ನೂರುನಗರ | ನಗರಸಭೆ ಕೋಲಾರ | 204, 205ರ ಪೈಕಿ | 3-30 | ಪೊಲೀಸ್ ಕ್ವಾರ್ಟಸ್ | ಕಾಲುವೆ | ಸ್ಮಶಾನ ರಹಮತ್ ನಗರ | ವಿನಾಯಕ ನಗರ |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ.

ಪಿ.ಆರ್.165

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಪ್ರಾರಂಭಿಕ ಅಧಿಸೂಚನೆ

**ನಂ. ಎಂಯುಎನ್. ಸಿಆರ್ 297/2003-04, ಕೋಲಾರ, ದಿನಾಂಕ:24ನೇ ಜನವರಿ, 2004**

ಕೋಲಾರ ನಗರದ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿರುವ ವಾಸದ ಮನೆಗಳು ಒತ್ತೊತ್ತಾಗಿರುವುದರಿಂದ ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣ ಉಂಟಾಗಿರುವುದನ್ನು ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಜನ ಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮತ್ತು ನಿರ್ಮೂಲನ ಕಾಯಿದೆ 1978ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡು ಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆ್ಯಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ನಂ.HUD 44, MSC 84 ದಿನಾಂಕ: 17ನೇ ಏಪ್ರಿಲ್, 1988ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ ಕೋಲಾರ ಜಿಲ್ಲಾಧಿಕಾರಿಗಳವರಿಗೆ ಮತ್ತು ಕಾರ್ಯದರ್ಶಿಗಳು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ರಿಸಿಲ್ದಾರ್ ರಸ್ತೆ, ಬೆಂಗಳೂರು ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ. ನಂ. | ವಿಸ್ತೀರ್ಣ ಎ- ಗುಂ | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
|---|---|---|---|---|---|---|---|---|
| 1. | ಬೀಡಿ ಕಾಲೋನಿ | ನಗರಸಭೆ ಕೋಲಾರ | 49, 50:1,2 | 3-36 | ರಸ್ತೆ ಹಾಗೂ ಖಾಸಿಂ ಸಾಬ್ ಮುಸ್ತಾಫ ಮನೆ, ಅಮೀರ್ ಜಾನ್ ಹಾಗೂ ಖಾಸಗಿ ಸ್ವತ್ತು | ರೈಲ್ವೆ ಟ್ರಾಕ್ ಮತ್ತು ರೈಲ್ವೆ ಸ್ವತ್ತು | ರಸ್ತೆ ಹಾಗೂ ಇಟ್ಟಿಗೆ ಫ್ಯಾಕ್ಟರಿ ಮತ್ತು ಖಾಸಗಿ ಸ್ವತ್ತು | ಹಳ್ಳ |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ.

ಪಿ.ಆರ್.166

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎ3.ಎಸ್‌ಡಿಎಲ್.ಸಿಆರ್.98/88-89, ದಿನಾಂಕ:17ನೇ ಜನವರಿ, 2004**

**ಉಪಸ್ಥಿತರು:** ಶ್ರೀ ಎನ್.ಎಲ್. ಶಾಂತಕುಮಾರ್, ಭಾಅಸೇ.,

**ಫಿರ್ಯಾದುದಾರ:** ಶ್ರೀ ಲಖದೇವಾರಾಯ್
ಬಿನ್ ದುಖನ್ ರೈ, 29 ವರ್ಷ, ವಾಚ್‌ಮನ್ ಕೆಲಸ, ಅಗ್ರೋ ಸಿಂಧ್ ಕೆಮಿಕಲ್ಸ್ ಲಿಮಿಟೆಡ್,
ಬೈರಾಪುರ, ದೇವನಹಳ್ಳಿ ತಾಲ್ಲೂಕು.

**ವಿರುದ್ಧ**

**ಅರ್ಜಿದಾರ:** ಶ್ರೀಮತಿ ರೇಶ್ಮ W/o ಮುಸ್ತಾಫ ಬೇಗ್
ಹಾಜಿ ಪಟೇಲ್ ಮಂಜಿಲ್,
ಅರಾಬಿಕ್ ಕಾಲೇಜ್ ರೋಡ್,
ಕೆ.ಜಿ. ಹಳ್ಳಿ, ಬೆಂಗಳೂರು-560045.

**ಪ್ರಸ್ತಾವನೆ:**

1. ಬೈರಾಪುರದ ಶ್ರೀ ನಾಗೇಂದ್ರ ಸಿಂಗ್ ಹಾಗೂ ಶ್ರೀ ಅರುಣ್‌ಕುಮಾರ್ ಪಾಂಡೆ ಎಂಬ ವ್ಯಕ್ತಿಗಳು ಅಗ್ರೋ ಸಿಂಧ್ ಕೆಮಿಕಲ್ಸ್ ಲಿಮಿಟೆಡ್, ಬೈರಾಪುರ, ದೇವನಹಳ್ಳಿ ತಾಲ್ಲೂಕಿನಲ್ಲಿ ವಾಚ್‌ಮನ್‌ಗಳಾಗಿದ್ದು ದಿನಾಂಕ:03.03.1999 ರ ಮಧ್ಯರಾತ್ರಿ 12.00 ಗಂಟೆ ಸುಮಾರಿಗೆ ವಿಜಯಪುರ ಕಡೆಯಿಂದ ಒಂದು ಹಸಿರು ಬಣ್ಣದ 407 ಟೆಂಪೋ ಸದರಿಯವರ ಫ್ಯಾಕ್ಟರಿ ಗೇಟ್ ಬಳಿ ನಿಲ್ಲಿಸಿ ತಿರುಗಿಸಿಕೊಂಡು ಫ್ಯಾಕ್ಟರಿ ಗೇಟ್‌ಗೆ ಬಲವಾಗಿ ಡಿಕ್ಕಿ ಹೊಡೆಸಿ ಗೇಟ್ ತೆರೆದುಕೊಂಡಿದ್ದು ಸದರಿ ವಾಹನದಲ್ಲಿದ್ದ ಸುಮಾರು 25 ಜನರು ಕೆಳಗೆ ಇಳಿದು ನಮ್ಮ ರಕ್ಷಣಾ ಕೊಠಡಿಯ ಗಾಜನ್ನು ಹೊಡೆದು ಒಳಗೆ ಪ್ರವೇಶ ಮಾಡಿ ದೂರವಾಣಿ ಸಂಪರ್ಕವನ್ನು ಕಡಿತಗೊಳಿಸಿ ಗಲಾಟೆ ಮಾಡಬಾರದೆಂದು ಬೆದರಿಸಿ ಆತನ ಎಡಗೈಗೆ ರಂಪದ ಸಣ್ಣ ತುಂಡಿನಿಂದ ಹೊಡೆದು ಗಾಯಪಡಿಸಿದ್ದು ಅಲ್ಲದೆ ಗಲಾಟೆ ಕೇಳಿ ಅಲ್ಲಿಗೆ ಬಂದ ಚಿಕ್ಕವೆಂಕಟಪ್ಪನಿಗೆ ಮಚ್ಚಿನಿಂದ ಎಡಗಾಲಿಗೆ ಹೊಡೆದು ಗಾಯಪಡಿಸಿ ಅವರ ಬಳಿ ಇದ್ದ ಗಡಿಯಾರವನ್ನು ಕಿತ್ತುಕೊಂಡು ಇವರಿಬ್ಬರನ್ನು ಮತ್ತು ಇನ್ನುಳಿದ ವಾಚ್‌ಮನ್‌ಗಳನ್ನು ಕೊಠಡಿಯಲ್ಲಿ ಕೂಡಿ ಹಾಕಿ ಅದಕ್ಕೆ ಇಬ್ಬರು ಆರೋಪಿಗಳು ಕಾವಲು ಕುಳಿತು ಇನ್ನುಳಿದವರು ಸದರಿ ಫ್ಯಾಕ್ಟರಿ ಒಳಗೆ ಹೋಗಿ ಅಲ್ಲಿ ಬೆಳೆಸಿದ್ದ 8 ಶ್ರೀಗಂಧದ ಮರಗಳನ್ನು ಕಟಾವು ಮಾಡಿ ರೆಂಬೆಗಳನ್ನು ಅಲ್ಲಿಯೇ ಬಿಟ್ಟು ಉಳಿದ ಭಾಗವನ್ನು ಟೆಂಪೋದಲ್ಲಿ ತುಂಬಿ ನಂತರ ಫ್ಯಾಕ್ಟರಿಗೆ ಸಂಬಂಧಿಸಿದ ಎಲ್ಲಾ ಬೀಗದ ಕೀಗಳನ್ನು ಮತ್ತು ನಾವು ವಾಸ ಮಾಡುತ್ತಿದ್ದ ಕೊಠಡಿಯ ಬೀಗದ ಕೀಗಳನ್ನು ಆರೋಪಿಗಳು ತೆಗೆದುಕೊಂಡು ಹೋಗಿರುತ್ತಾರೆ. ಅಷ್ಟರಲ್ಲಿ ಊರಿನ ಗ್ರಾಮಸ್ಥರು ವಿಷಯ ತಿಳಿದು ಬರುವಷ್ಟರಲ್ಲಿ ರಸ್ತೆಯಲ್ಲಿ ಅವರ ಪೈಕಿ ಕಾವಲು ಕಾಯುತ್ತಿದ್ದ ಇಬ್ಬರು ಕೂಗಿಕೊಂಡು ಎಲ್ಲರೂ ಬಂದು ಅವರ ಟೆಂಪೋದಲ್ಲಿ ಹತ್ತಿಕೊಂಡು ಹಾರೋಹಳ್ಳಿ ಕಡೆ ಪರಾರಿಯಾಗಿದ್ದು ಇರುತ್ತದೆ. ಅದು ಅಲ್ಲದೆ ಕೊಠಡಿಯಲ್ಲಿದ್ದ ವಾಚ್‌ಮನ್‌ಗಳ ಹಣ 9,000 ರೂ.ಗಳನ್ನು ಮತ್ತು ಕೈಗಡಿಯಾರ ಮತ್ತು ಟಾರ್ಚ್‌ನ್ನು ಕಿತ್ತುಕೊಂಡು ಹೋಗಿದ್ದು ಇರುತ್ತದೆ. ಅನಂತರ ಗ್ರಾಮಸ್ಥರು ಬಂದು ಫ್ಯಾಕ್ಟರಿ ಬೀಗಗಳನ್ನು ತೆಗೆದಿದ್ದು ಇರುತ್ತದೆ. ಟೆಂಪೋ ಸಂಖ್ಯೆ: ಕೆಎ04-7959 ನಂತೆ ಇದ್ದು ಈ ಮಾಹಿತಿಯುಳ್ಳ ದಿನಾಂಕ: 04.03.1999ರ ಬೆಳಗಿನ ಜಾವ 4.00 ಗಂಟೆಗೆ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿಗಳ ಸಮಕ್ಷಮ ನಡೆದ ಆತನ ಹೇಳಿಕೆ ಆಧಾರದ ಮೇಲೆ ವಿಜಯಪುರ ಠಾಣೆಯ ಆಗಿನ ಆರಕ್ಷಕ ಉಪನಿರೀಕ್ಷಕರಾದ ಶ್ರೀ ಎನ್. ಬೀರಪ್ಪ ಇವರು ತಮ್ಮ ಠಾಣೆಯ ಮೊಕದ್ದಮೆ ಸಂಖ್ಯೆ:30/99 ಭಾ.ದಂ.ಸಂ. ಕಲಂ 395 ಹಾಗೂ ಕ.ಅ.ಕಾ. ಕಲಂ 86 ಹಾಗೂ 87ರ ಕೆಳಗೆ ನೊಂದಾಯಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ದೇವನಹಳ್ಳಿ ಜೆಎಂಎಫ್‌ಸಿ ನ್ಯಾಯಾಲಯಕ್ಕೆ ಹಾಗೂ ಅದರ ನಕಲನ್ನು ಅವರ ಮೇಲಾಧಿಕಾರಿಗಳಿಗೆ ಕಳುಹಿಸಿದ್ದು ಇರುತ್ತದೆ.

2. ದೇವನಹಳ್ಳಿ ಪೊಲೀಸ್ ವೃತ್ತ ನಿರೀಕ್ಷಕರಿಗೆ ಪೊಲೀಸ್ ಅಧೀಕ್ಷಕರಿಂದ ಬಂದ ಮಾಹಿತಿ ಮೇರೆಗೆ ಸದರಿಯವರು ದಿನಾಂಕ:04.03.1999 ರಂದು ಕಮ್ಮಸಂದ್ರ ಗ್ರಾಮದ ಬಳಿ ಇರುವ ಸತ್ಯವಾರದ ರಸ್ತೆಯ ಪಕ್ಕದ ಕಣದಲ್ಲಿ ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಸ್ಥಳಕ್ಕೆ ಧಾವಿಸಿ ಹೋದಾಗ ಈ ಮೇಲೆ ಹೇಳಿದ ಟೆಂಪೋ 407 ಟಾಟಾ ಕೆಎ04-7959ನೆದ್ದು ನಿಂತಿದ್ದು ಟೆಂಪೋದ ಹಿಂದಿನ ಬಾಗಿಲು ಜಖಂಗೊಂಡಿದ್ದು, ಟೆಂಪೋವನ್ನು ಪರಿಶೀಲಿಸಿ ನೋಡಿದಾಗ ಅದರ ಒಳಗಡೆ ಮರಗಳ ತುಂಡುಗಳು ಕಂಡುಬಂದಿದ್ದು ಅವುಗಳನ್ನು ಮೂಸಿ ನೋಡಲಾಗಿ ಶ್ರೀಗಂಧದ ವಾಸನೆ ಬಂದಿದ್ದು ವಾಹನದಲ್ಲಿ ಒಟ್ಟು ವಿವಿಧ ಗಾತ್ರಗಳ 10 ಶ್ರೀಗಂಧದ ಮರಗಳ ತುಂಡುಗಳು ಕಂಡುಬಂದಿದ್ದು ವಾಹನದಲ್ಲಿ 4 ಕಬ್ಬಿಣದ ಗರಗಸಗಳು 2 ಕಬ್ಬಿಣದ ಮಚ್ಚುಗಳು 1 ಕಬ್ಬಿಣದ ಪೈಪು 1 ಕಬ್ಬಿಣದ ರಾಡು 3 ಜೊತೆ ಚಪ್ಪಲಿಗಳು ಒಂದು ಹಿಡಿ ಗಾತ್ರದ 50 ಜಲ್ಲಿ ಕಲ್ಲುಗಳು ಕಂಡುಬಂದಿದ್ದು ಅಲ್ಲದೆ ವಾಹನದ ಹಿಂಭಾಗದ ಎಡ ಚಕ್ರ ಪಂಚರ್ ಆಗಿದ್ದು ಕೂಡ ಕಂಡುಬಂದಿದ್ದು ವಾಹನದ ಒಳಗಡೆ ಇರುವ ಬ್ಯಾಗುಗಳನ್ನು ಪರಿಶೀಲಿಸಿದಾಗ ವಾಹನಕ್ಕೆ ಸಂಬಂಧಿಸಿದ ಕಾಗದ ಪತ್ರಗಳು ಕಂಡುಬಂದಿದ್ದು ಸದರಿ ಕಾಗದ ಪತ್ರಗಳಿಂದ ವಾಹನವು ಮೇಲೆ ಹೇಳಿದ ಶ್ರೀಮತಿ ರೇಶ್ಮ ಇವರ ಹೆಸರಿಗೆ ಆರ್.ಸಿ. ಪುಸ್ತಕ ಇದ್ದುದು ಕಂಡುಬಂದಿದ್ದು ವಾಹನದಲ್ಲಿ ದೊರೆತ ಶ್ರೀಗಂಧದ ಮರಗಳನ್ನು ಸಾಗಾಣಿಕೆ ಮಾಡಲು ಯಾವುದೇ ಕಾಗದಪತ್ರಗಳು ದೊರಕದಿರುವುದರಿಂದ ದೇವನಹಳ್ಳಿ ಪೊಲೀಸ್ ವೃತ್ತ ನಿರೀಕ್ಷಕರು ಆ ಕೂಡಲೇ ವಾಹನವನ್ನು ಶ್ರೀಗಂಧದ ಮರದ ತುಂಡುಗಳು ಹಾಗೂ ಇತರೆ ವಸ್ತುಗಳನ್ನು ಸ್ಥಳದಲ್ಲಿ ಪಂಚರ ಸಮಕ್ಷಮ ಮಹಜರ್ ಮೂಲಕ ಬೆಳಗಿನ ಜಾವ 6.30 ರಿಂದ 8.30ರ ಸಮಯದಲ್ಲಿ ವಶಪಡಿಸಿಕೊಂಡಿದ್ದು ಇರುತ್ತದೆ. ಮತ್ತು ಈ ಬಗ್ಗೆ ಸದರಿ ಅಧಿಕಾರಿಗಳು ಪಿಎಫ್ ಸಂಖ್ಯೆ:26/99ನೇದನ್ನು ಕೂಡ ತಯಾರು ಮಾಡಿದ್ದು ಕೂಡ ಇರುತ್ತದೆ.

3. ಪ್ರಕರಣಕ್ಕೆ ದೇವನಹಳ್ಳಿ ವೃತ್ತ ಆರಕ್ಷಕ ನಿರೀಕ್ಷಕರು ದಿನಾಂಕ:31.03.1999 ರಂದು ಪತ್ರವೊಂದನ್ನು ಬರೆದು ವಾಹನ ಹಾಗೂ ಶ್ರೀಗಂಧದ ಮರದ ತುಂಡುಗಳನ್ನು ಅರಣ್ಯ ಇಲಾಖೆಗೆ ಮುಂದಿನ ಕ್ರಮಕ್ಕಾಗಿ ವಹಿಸಿದ್ದು ಇರುತ್ತದೆ. ಅದರಂತೆ ಸದರಿಯವರು ತಮ್ಮ ಪತ್ರದ ಜೊತೆ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ವರ್ತಮಾನ ವರದಿಯ ನಕಲನ್ನು ವಾಹನ ಹಾಗೂ ಮರದ ತುಂಡುಗಳನ್ನು ವಹಿಸಿಕೊಂಡ ಮಹಜರ್‌ನ ನಕಲು ಹಾಗೂ ಮರಗಳನ್ನು ಕಡಿದ ಫ್ಯಾಕ್ಟರಿಯ ಸ್ಥಳದ ಮಹಜರ್ ನಕಲು ಹಾಗೂ 2 ಪಿಎಫ್ ಗಳ ನಕಲುಗಳನ್ನು ಸಲ್ಲಿಸಿದ್ದು ಇರುತ್ತದೆ.

4. ದಿನಾಂಕ:20.03.1999 ರಂದು ಅರ್ಜಿದಾರರು ಪ್ರಕರಣಕ್ಕೆ ಅರ್ಜಿಯೊಂದನ್ನು ಅವರ ನ್ಯಾಯವಾದಿಗಳ ಮುಖಾಂತರ ಸಲ್ಲಿಸಿ ಪ್ರಕರಣದಲ್ಲಿ ಪೊಲೀಸರು ವಶಪಡಿಸಿಕೊಂಡ ತಮ್ಮ ವಾಹನಕ್ಕೆ ಹಾಗೂ ಅದರಲ್ಲಿ ದೊರಕಿದ ಶ್ರೀಗಂಧದ ಮರಗಳ ತುಂಡುಗಳ ಸಾಗಾಣಿಕೆಗೆ ಯಾವುದೇ ಸಂಬಂಧವಿಲ್ಲದ್ದರಿಂದ ಮುಟ್ಟುಗೋಲು ಪ್ರಕರಣವನ್ನು ಕೈಬಿಟ್ಟು ವಾಹನವನ್ನು ತಮ್ಮ ಸಂಪೂರ್ಣ ವಶಕ್ಕೆ ನೀಡಬೇಕೆಂದು ಮತ್ತು ಇನ್ನೊಂದು ಅರ್ಜಿಯನ್ನು ಸಲ್ಲಿಸಿ ಪ್ರಕರಣ ಇತ್ಯರ್ಥವಾಗುವವರೆಗೆ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ನೀಡಬೇಕೆಂದು ವಿನಂತಿಸಿದ್ದು ಇರುತ್ತದೆ.

5. ತದನಂತರ ಪ್ರಾಧಿಕಾರವು ಅರ್ಜಿದಾರರಿಗೆ ದಿನಾಂಕ:04.05.1999 ರಂದು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71ಬಿ ನೇದರಡಿ ಅರ್ಜಿದಾರರಿಗೆ ಕಾರಣಕೇಳುವ ನೋಟೀಸ್ ಒಂದನ್ನು ಹೊರಡಿಸಿ ಸದರಿಯವರ ವಾಹನದಲ್ಲಿ ಅಕ್ರಮ ಶ್ರೀಗಂಧದ ಸಾಗಾಣಿಕೆಯಾದ್ದರಿಂದ ಅದನ್ನು ಏಕೆ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕಾರಣಕೇಳುವ ನೋಟೀಸನ್ನು ಹೊರಡಿಸಿರುತ್ತದೆ. ಸದ್ರಿ ನೋಟೀಸ್‌ಗೆ ವಾಹನದ ಮಾಲೀಕರಾದ ಜಿಪಿಎ ಶ್ರೀ ಎಂ. ವಿಜಯಕುಮಾರ್ ಇವರು ತಕರಾರನ್ನು ಸಲ್ಲಿಸಿದ್ದು ಇರುತ್ತದೆ.

6. ಹಿಂದಿನ ಅಧಿಕಾರಿಗಳು ದಿನಾಂಕ:26.06.1999 ರಂದು ಆದೇಶವೊಂದನ್ನು ಹೊರಡಿಸಿ ಅರ್ಜಿದಾರಳು 35,000/- ರೂಪಾಯಿಗಳ ಬ್ಯಾಂಕ್ ಗ್ಯಾರಂಟಿ ಹಾಗೂ ಅದೇ ಮೊತ್ತಕ್ಕೆ ಜಾಮೀನುದಾರರನ್ನು ಒದಗಿಸಿದಲ್ಲಿ ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ಪಡೆದುಕೊಳ್ಳಬಹುದು ಅಂತ ಇತರೆ ಷರತ್ತುಗಳೊಂದಿಗೆ ಆದೇಶ ಮಾಡಿದ್ದು ಇರುತ್ತದೆ. ಸದರಿ ಆದೇಶದ ಪ್ರಕಾರ ಅರ್ಜಿದಾರಳು ಪ್ರಾಧಿಕಾರಕ್ಕೆ 35,000/- ರೂಪಾಯಿಗಳ ಬ್ಯಾಂಕ್ ಗ್ಯಾರಂಟಿ ಹಾಗೂ ಜಾಮೀನನ್ನು ಒದಗಿಸಿದ್ದರಿಂದ ವಾಹನವನ್ನು ಅರ್ಜಿದಾರಳಿಗೆ ಮಧ್ಯಂತರ ವಶಕ್ಕೆ ಬಿಟ್ಟುಕೊಟ್ಟಿರುತ್ತದೆ.

7. ತದನಂತರ ಪ್ರಾಧಿಕಾರವು ವಾಹನವನ್ನು ಹಾಗೂ ಅದರಲ್ಲಿ ಅಕ್ರಮವಾಗಿ ಕಳ್ಳಸಾಗಾಣಿಕೆಯಾಗುತ್ತಿದ್ದು ಶ್ರೀಗಂಧದ ಮರದ ತುಂಡುಗಳ ಮುಟ್ಟುಗೋಲು ವಿಚಾರಣೆ ಪ್ರಯುಕ್ತ ಹಲವಾರು ದಿನಾಂಕಗಳನ್ನು ನಿಗದಿಪಡಿಸಿ ಅರ್ಜಿದಾರಳಿಗೆ ಅವಳ ಜಿಪಿಎ Holder ನಿಗೆ ಹಾಗೂ ಪೊಲೀಸ್ ಅಧಿಕಾರಿಗಳು ಮತ್ತು ಮಹಜರ್ ಸಾಕ್ಷಿಗಳಿಗೆ ಸಮನ್ಸ್‌ಗಳನ್ನು ಹೊರಡಿಸಿ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿಯವರು ತಮ್ಮ ಸಾಕ್ಷಿಯನ್ನು ನೀಡಬೇಕೆಂದು ಕೋರಿಕೊಳ್ಳಲಾಗಿತ್ತು. ಈ ಬಗ್ಗೆ ಪ್ರಾಧಿಕಾರದ ಮುಂದೆ ಪ್ರತಿಯೊಂದು ಮಹಜರ್ ಸಾಕ್ಷಿಗಳನ್ನು ಪ್ರಾ.ಸ.1 ಹಾಗೂ 2 ಅಂತ ವಿಚಾರಣಾಧಿಕಾರಿಗಳು ಮಹಜರ್‌ನ್ನು ನಿಶಾನೆ ಪಿ1 ಎಂದು ಗುರುತಿಸಿಕೊಂಡು ಅನ್ವೇಷಣಾಧಿಕಾರಿ ಪೊಲೀಸ್ ವೃತ್ತ ಇನ್ಸ್‌ಪೆಕ್ಟರ್‌ರವರನ್ನು ಪ್ರಾ.ಸ. 3 ನೆಯದಾಗಿ ವಿಚಾರಿಸಿ ಸದರಿಯವರ ಸಾಕ್ಷಿಯಲ್ಲಿ ಕೂಡ ಆತ ತನಿಖೆಯಲ್ಲಿ ತಯಾರಿಸಿದ ಇತರೆ 4 ದಾಖಲಾತಿಗಳನ್ನು ನಿಶಾನಿಸಿಕೊಂಡಿರುತ್ತದೆ.

8. ಮಹಜರ್ ಸಾಕ್ಷಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್‌ರವರ ಸಾಕ್ಷ್ಯ ಮತ್ತು 5 ಅಭಿಯೋಜನದ ದಾಖಲಾತಿಗಳನ್ನು ಪರಿಶೀಲಿಸಿದಾಗ ಎ.ಡಿ.ಪಿ. ರವರ ವಾದವನ್ನು ಕೇಳಲಾಗಿದೆ. ಪ್ರಕರಣದಲ್ಲಿ ಈ ಸಾಕ್ಷ್ಯಾಧಾರಗಳಿಂದ ನಾನು ಇತ್ಯರ್ಥಪಡಿಸಬಹುದಾದ ಅಂಶಗಳು ಈ ಕೆಳಕಂಡಂತಿರುತ್ತವೆ.

(1) ದಿನಾಂಕ:04.03.1999ರ ಬೆಳಗಿನ 6.30 ರಿಂದ 8.30ರ ಸಮಯದಲ್ಲಿ ಕಮ್ಮಸಂದ್ರ ಗ್ರಾಮದ ಶ್ರೀ ಮುನಿರಾಜಪ್ಪ ಇವರ ಜಮೀನಿನ ಕಣದಲ್ಲಿ ಅರ್ಜಿದಾರಳ ವಾಹನ ಟೆಂಪೋ ನೋಂದಣಿ ಸಂಖ್ಯೆ:ಕೆಎ04-7959 ನೇದರಲ್ಲಿ ಅಕ್ರಮವಾಗಿ ಶ್ರೀಗಂಧದ ಕಳ್ಳಸಾಗಾಣಿಕೆಯಾಗುತ್ತಿತ್ತು.

(2) ಅದನ್ನು ತಪ್ಪಿಸಲು ಅರ್ಜಿದಾರಳು ತೆಗೆದುಕೊಂಡ ಕ್ರಮಗಳೇನು ಮತ್ತು ಅಕ್ರಮ ಸಾಗಾಣಿಕೆಯನ್ನು ಅಲ್ಲಗೆಳೆಯಲು ಅರ್ಜಿದಾರಳು ಪ್ರಾಧಿಕಾರಕ್ಕೆ ಯಾವ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದಾರೆ.

(3) ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಶ್ರೀಗಂಧದ ಮರದ ತುಂಡುಗಳು ಮತ್ತು ಇತರೆ ವಸ್ತುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಾಗಿವೆಯೋ ಹೇಗೆ.

ಈ ಮೇಲಿನ ಅಂಶಗಳಿಗೆ ಕೆಳಕಂಡಂತೆ ಉತ್ತರವನ್ನು ಬಯಸುತ್ತೇನೆ.

(1) ಅಕ್ರಮ ಸಾಗಾಣಿಕೆಯಾಗುತ್ತಿತ್ತು.

(2) ಅರ್ಜಿದಾರಳು ಯಾವುದೇ ಕ್ರಮವನ್ನು ತೆಗೆದುಕೊಂಡಿರುವುದಿಲ್ಲ ಮತ್ತು ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರಕ್ಕೆ ಒದಗಿಸಿರುವುದಿಲ್ಲ.

(3) ಈ ಕಾರಣಗಳಿಂದ ಅರ್ಜಿದಾರಳ ವಾಹನ, ಅದರಲ್ಲಿ ದೊರೆತ ಶ್ರೀಗಂಧದ ಮರಗಳ ತುಂಡುಗಳು ಹಾಗೂ ಇತರೆ ವಸ್ತುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಾಗಿರುತ್ತವೆ. ಇದಕ್ಕೆ ಈ ಕೆಳಕಂಡ ಕಾರಣಗಳನ್ನು ನೀಡಬಯಸುತ್ತೇನೆ.

**ಕಾರಣಗಳು**

ಪ್ರಕರಣದಲ್ಲಿ ಅಭಿಯೋಜನೆಯು ವಿಚಾರಿಸಿದ 2 ಮಹಜರ್ ಸಾಕ್ಷಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್ ಸಾಕ್ಷಿ ಮತ್ತು ಈ ಮೂರು ಜನ ಸಾಕ್ಷಿಗಳು ಸ್ಥಳದಲ್ಲಿ ಅಭಿಯೋಜನೆಯು ಗುರುತಿಸಿಕೊಂಡ 5 ದಾಖಲಾತಿ ಸಾಕ್ಷ್ಯಗಳನ್ನು ಪರಾಂಭರಿಸಿದಲ್ಲಿ ದಿನಾಂಕ 04.03.1999 ರಂದು ಘಟನೆ ಸ್ಥಳದಲ್ಲಿ ಅರ್ಜಿದಾರಳ ಟೆಂಪೋ ಟಾಟಾ 407 ನೋಂದಣಿ ಸಂಖ್ಯೆ:ಕೆಎ01-7959 ನೇದರಲ್ಲಿ 10 ಶ್ರೀಗಂಧದ ಮರದ ತುಂಡುಗಳನ್ನು ಅಕ್ರಮವಾಗಿ ಸಾಗಾಣಿಕೆಯಾಗುತ್ತಿರುವ ವಿಷಯ ಮೇಲ್ನೋಟಕ್ಕೆ ಕಂಡುಬರುತ್ತದೆ. ಈ ಮೂರು ಸಾಕ್ಷಿಗಳನ್ನು ಅರ್ಜಿದಾರರಾಗಲೀ, ಅವರ ಜಿಪಿಎ ಯಾರಾಗಲೀ ಅಥವಾ ಅವರ ನ್ಯಾಯವಾದಿಗಳಾಗಲೀ ಪ್ರಾಧಿಕಾರದ ಮುಂದೆ ಸಾಕ್ಷಿ ವೇಳೆಗೆ ಹಾಜರಿದ್ದು ಪಾಟೀ ಸವಾಲನ್ನು ಸಹ ಮಾಡಿರುವುದಿಲ್ಲ. ಈ ಕುರಿತಂತೆ ಈ ಮೂರು ಸಾಕ್ಷಿಗಳನ್ನು ಹಾಗೂ ಅಭಿಯೋಜನೆಯು ಗುರುತಿಸಿಕೊಂಡ 5 ದಾಖಲಾತಿಗಳ ಸಾಕ್ಷಿಯನ್ನು ಪ್ರಾಧಿಕಾರವು ನಂಬದೇ ಇರುವುದಕ್ಕೆ ಯಾವುದೇ ಕಾರಣಗಳು ದೊರಕುತ್ತಿಲ್ಲ. ಹೀಗಾಗಿ ಪ್ರಾ.ಸ. 1 ರಿಂದ 3 ಸಾಕ್ಷಿಗಳನ್ನು ನಿಶಾನೆ ಪಿ1 ರಿಂದ 5 ದಾಖಲಾತಿಗಳನ್ನು ಪ್ರಾಧಿಕಾರವು ಸಂಪೂರ್ಣವಾಗಿ ಅವಲಂಬಿಸುತ್ತಾ ಪ್ರಕರಣದಲ್ಲಿ ಅರ್ಜಿದಾರಳ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ಮರಗಳ ತುಂಡುಗಳು ಹಾಗೂ ಅವುಗಳನ್ನು ಕಡಿಯಲು ಉಪಯೋಗಿಸಿದ ಮಾರಕಾಸ್ತ್ರಗಳು ಸದರಿ ವಾಹನದಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿತ್ತು ಅಂತ ಪ್ರಾಧಿಕಾರವು ತೀರ್ಮಾನಕ್ಕೆ ಬಂದಿರುತ್ತದೆ. ಅದರಂತೆ ಈ ರೀತಿಯ ಸಾಕ್ಷ್ಯಾಧಾರಗಳನ್ನು ಅಲ್ಲಗೆಳೆಯಲು ಈ ಮೇಲೆ ಹೇಳಿದಂತೆ ಅರ್ಜಿದಾರಳಾಗಲೀ, ಅವಳ ಜಿಪಿಎ ಆಗಲೀ ಅಥವಾ ಅವರ ನ್ಯಾಯವಾದಿಗಳಾಗಲೀ ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸಿರುವುದಿಲ್ಲ. ಪ್ರಾಧಿಕಾರವು ಈ ಬಗ್ಗೆ ಕಡತವನ್ನು ಪರಿಶೀಲಿಸಿದಾಗ ಅನೇಕ ಸಮನ್ಸ್‌ಗಳು ಹಾಗೂ ನೋಟೀಸ್‌ಗಳು ಅರ್ಜಿದಾರಳಿಗೆ ಅವಳ ಜಿಪಿಎ ಅವರಿಗೆ ಹಾಗೂ ಅವರ ನ್ಯಾಯವಾದಿಗಳಿಗೆ ಹೋಗಿದ್ದರೂ ಸಹ ಸದರಿಯವರು ಸದರಿ ನೋಟೀಸ್‌ಗಳನ್ನು ತೆಗೆದುಕೊಳ್ಳದೆ ಅವುಗಳು ಅಂಚೆ ಇಲಾಖೆಯ ಪೋಸ್ಟ್‌ಮನ್‌ನ ಷರಾದೊಂದಿಗೆ ಪ್ರಾಧಿಕಾರಕ್ಕೆ ಹಿಂದಿರುಗಿ ಬಂದಿದ್ದು ಕಂಡುಬರುತ್ತದೆ. ಅದೇ ರೀತಿ ಸದರಿಯವರ ನ್ಯಾಯವಾದಿಗಳು ಕೂಡ ತಮ್ಮ ಕಕ್ಷಿದಾರರಾದ ಅರ್ಜಿದಾರಳು ಹಾಗೂ ಅವಳ ಜಿಪಿಎ ನ ಪರವಾಗಿ ಪ್ರಾಧಿಕಾರದ ಮುಂದೆ ವಿಚಾರಣೆಗೆ ಹಾಜರಾಗಿದ್ದು ಇರುವುದಿಲ್ಲ. ಪ್ರಕರಣದಲ್ಲಿ ಸದರಿಯವರು ಅರ್ಜಿದಾರಳು ಹಾಗೂ ಜಿಪಿಎ ನು ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಪಡೆದುಕೊಂಡ ನಂತರ ಸರಿಯಾಗಿ ಪ್ರಾಧಿಕಾರದ ಮುಂದೆ ವಿಚಾರಣೆಗೆ ಹಾಜರಾಗಿದ್ದು ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ದಿನಾಂಕ:04.03.1999 ರಂದು ಕಮ್ಮಸಂದ್ರ ಗ್ರಾಮದ ಶ್ರೀ ಮುನಿರಾಜಪ್ಪ ಅವರ ಜಮೀನಿನ ಕಣದಲ್ಲಿ ಅರ್ಜಿದಾರಳ ಈ ಮೇಲೆ ಹೇಳಿದ ಟೆಂಪೋ ವಾಹನದಲ್ಲಿ ಅಕ್ರಮ ಶ್ರೀಗಂಧದ ಕಳ್ಳಸಾಗಾಣಿಕೆಯಾಗುತ್ತಿತ್ತು ಅಂತ ತೀರ್ಮಾನಿಸಿ ಸದರಿಯವರ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಿದೆ ಎಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಮಾಡಬಯಸುತ್ತೇನೆ.

**ಆದೇಶ**

ಇದರಲ್ಲಿ ಶ್ರೀ ಎನ್.ಎಲ್. ಶಾಂತಕುಮಾರ್, ಭಾಅಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ಗ್ರಾಮಾಂತರ ವಿಭಾಗ ಬೆಂಗಳೂರು ಆದ ನನಗೆ ಕರ್ನಾಟಕ ಅರಣ್ಯ ಕಾಯ್ದೆ ಕಲಂ 71ಎ ನೇದರ ಕೆಳಗೆ ಇರುವ ಅಧಿಕಾರವನ್ನು ಚಲಾಯಿಸುತ್ತಾ ದೇವನಹಳ್ಳಿ ಪೊಲೀಸರು ತಮ್ಮ ಮೊಕದ್ದಮೆ ಸಂಖ್ಯೆ:39/99ರಲ್ಲಿ ವಶಪಡಿಸಿಕೊಂಡ ಅರ್ಜಿದಾರಳ ವಾಹನ ಟೆಂಪೋ ಸಂಖ್ಯೆ:ಕೆಎ04-7959 ನೇದನ್ನು ಹಾಗೂ ಅದರಲ್ಲಿ ದೊರೆತ ಶ್ರೀಗಂಧದ ಮರದ ತುಂಡುಗಳು ಮತ್ತು ಸದರಿ ವಾಹನದಲ್ಲಿ ದೊರೆತ ಇತರೆ ಮಾರಕಾಸ್ತ್ರಗಳನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಅರ್ಜಿದಾರಳು ಹಾಗೂ ಅವಳ ಜಿಪಿಎ ನು ಪ್ರಾಧಿಕಾರಕ್ಕೆ ಒದಗಿಸಿದ ರೂ.35,000-00 (ಮೂವತ್ತೈದು ಸಾವಿರ ರೂಗಳು ಮಾತ್ರ) ಗಳ ಬ್ಯಾಂಕ್ ಗ್ಯಾರಂಟಿಯನ್ನು ಸರ್ಕಾರಕ್ಕೆ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು ಅಂತ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಹೊರಡಿಸಿದ 30 ದಿವಸಗಳೊಳಗಾಗಿ ಯಾವುದೇ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ಇಂದು ದಿನಾಂಕ:17.01.2004 ರಂದು ಹೇಳಿ ಬರೆಯಿಸಿ ತಪ್ಪುಗಳನ್ನು ಸರಿಪಡಿಸಿ ತೆರೆದ ನ್ಯಾಯಾಲಯದಲ್ಲಿ ಪ್ರಕಟಿಸಲಾಗಿದೆ.

**ಎನ್.ಎಲ್. ಶಾಂತಕುಮಾರ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ,
ಬೆಂಗಳೂರು.

ಪಿ.ಆರ್.167

**THE DEPUTY COMMISSIONER, BANGALORE RURAL DISTRICT, BANGALORE**

**FORM-29**

**DECLARATION UNDER SECTION (5) OF SECTION 68 RULE 96**

**No. LND(C)SR.15/2001-02, Dated:14th January, 2004**

In exercise of the powers conferred by Sub-Section (5) of the Karnataka Land Revenue Act, 1964 the State Government being satisfied after considering the record of the proceedings and the report of the Deputy Commissioner, Bangalore Rural District, that the public tank or part thereof specified in the schedule to the Notification issued under sub-section (1) of the said section and specified in the Schedule below as not required for the use of the public, hereby declares that all rights of the public as well as of persons in or over such part of the public tanks are extinguised.

**SCHEDULE**

Village in which the part of the tank is situated:Ballapattana

1. Taluk: Channapattana
2. District: Bangalore Rural
3. Description of the Part of the Sarkari Katte
4. Approximate area of the part of the

| S.No. | Ext. | Village |
|---|---|---|
| 7 | 2-36 | Ballapattana |

**BOUNDARIES**

**S.No.** 7
**East:** Channapattana-Halaguru Road.
**West:** Gramatana (Shravanaiahan Thopu)
**North:** Sarakari Halla
**South:** Road and Channamma's land (Masidi land)

Deputy Commissioner,
Bangalore Rural District,
Bangalore.

PR-168

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯದಲ್ಲಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**

**ಅಧಿಭಾರ ಅರ್ಜಿ ಸಂಖ್ಯೆ:6:2001-02**

**ಅಧಿಭಾರ ಅರ್ಜಿ ಸಂಖ್ಯೆ: 16:2003-04**

| ವಾದಿ | ವಿರುದ್ಧ | ಪ್ರತಿವಾದಿಗಳು |
|---|---|---|
| ಸಹಕಾರ ಅಭಿವೃದ್ಧಿ ಅಧಿಕಾರಿ<br>ದೇವನಹಳ್ಳಿ ತಾಲ್ಲೂಕು, ದೇವನಹಳ್ಳಿ. | | 1. ಶ್ರೀಮತಿ ಟಿ. ಶೋಭಾ<br>ಅಧ್ಯಕ್ಷರು<br>ದೇವನಹಳ್ಳಿ ಟೌನ್ ಮಹಿಳಾ ವಿವಿದ್ದೋದ್ದೇಶ<br>ಸಹಕಾರ ಸಂಘ ನಿಯಮಿತ, ದೇವನಹಳ್ಳಿ<br>2. ಶ್ರೀಮತಿ ಬಿ. ಗಾಯಿತ್ರಿ<br>ಕಾರ್ಯದರ್ಶಿ,<br>ದೇವನಹಳ್ಳಿ ಟೌನ್ ಮಹಿಳಾ ವಿವಿದ್ದೋದ್ದೇಶ<br>ಸಹಕಾರ ಸಂಘ ನಿಯಮಿತ, ದೇವನಹಳ್ಳಿ. |

**ಸ್ಥಿರಾಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ಅನ್ವಯ ನೀಡಿರುವ ನೋಟೀಸು**

ಈ ನ್ಯಾಯಾಲಯದಲ್ಲಿ ದಾಖಲಾಗಿರುವ ಅಧಿಭಾರ ಅರ್ಜಿಗಳಲ್ಲಿ ಪ್ರತಿವಾದಿ 1 ಮತ್ತು 2 ಗಳು ಸದರಿ ಸಹಕಾರ ಸಂಘದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 65ರ ಪರಿವೀಕ್ಷಣಾ ವರದಿಯಂತೆ ರೂ. 1,97,924.63 ಪೈಗಳ ಹಣ ದುರುಪಯೋಗ ಮಾಡಿರುವುದಾಗಿ ತಿಳಿಸುತ್ತಾ ಸದರಿ ಮೊಬಲಗನ್ನು ವಸೂಲು ಮಾಡಲು ಆದೇಶ ನೀಡಲು ವಾದಿಯ ಅರ್ಜಿದಾರರು ಕೋರಿರುತ್ತಾರೆ.

ಅರ್ಜಿದಾರರು (ವಾದಿ) ಅರ್ಜಿಯನ್ನು ಸಲ್ಲಿಸಿ ಸದರಿ ಅರ್ಜಿಯು ಇತ್ಯರ್ಥವಾಗಲು ವಿಳಂಬವಾಗುವ ಸಾಧ್ಯತೆಯಿರುವುದರಿಂದ 2ನೇ ಪ್ರತಿವಾದಿ ಹೊಂದಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡಿದಲ್ಲಿ ಪ್ರತಿವಾದಿಗಳು ಹಣ ದುರುಪಯೋಗ ಮಾಡಿರುವ ಮೊಬಲಗನ್ನು ವಸೂಲಿ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ 2ನೇ ಪ್ರತಿವಾದಿ ಹೊಂದಿರುವ ಕೆಳಗೆ ಸೂಚಿಸಿರುವ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ಅನ್ವಯ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೋರಿರುತ್ತಾರೆ.

ಅರ್ಜಿದಾರರ (ವಾದಿ) ಕೋರಿಕೆಯನ್ನು ಪರಿಗಣಿಸಿ 2ನೇ ಪ್ರತಿವಾದಿ ಹೊಂದಿರುವ ಸ್ಥಿರಾಸ್ತಿಯನ್ನು ಸದರಿ ಅರ್ಜಿಯು ಇತ್ಯರ್ಥವಾಗುವ ಪೂರ್ವದಲ್ಲಿ ಮುಟ್ಟುಗೋಲು ಹಾಕಿಕೊಳ್ಳುವುದು ಅತ್ಯವಶ್ಯಕ ಎಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ಹಾಗೂ ಸರಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001: ದಿನಾಂಕ:21.11.2001ರ ಅನ್ವಯ ನನಗೆ ದತ್ತವಿರುವ ಅಧಿಕಾರವನ್ನು ಚಲಾಯಿಸಿ ಎರಡನೇ ಪ್ರತಿವಾದಿಯ ಈ ಕೆಳಕಂಡ ಅನುಬಂಧದಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾ ಈ ಬಗ್ಗೆ ಎರಡನೇ ಪ್ರತಿವಾದಿ ಈ ಆದೇಶ ತಲುಪಿದ 15 ದಿವಸಗಳೊಳಗಾಗಿ ಮುಟ್ಟುಗೋಲು ಹಾಕಿಕೊಂಡಿರುವ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಕ್ಯಾಷ್ ಸೆಕ್ಯೂರಿಟಿ) ನೀಡಿ ಸದರಿ ಆದೇಶವನ್ನು ಹಿಂತೆಗೆದುಕೊಳ್ಳಲು ಕೋರಬಹುದೆಂದು ಅವಕಾಶ ನೀಡಲಾಗಿದೆ. ತಪ್ಪಿದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲು ನೀಡಿರುವ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ಹಾಗೂ ಈ ಸ್ಥಿರಾಸ್ತಿಯನ್ನು ಮಾರಾಟ ಮಾಡಲಾಗಲೀ, ಉಡುಗೊರೆ ಹಾಗೂ ಇತರೇ ಕಾರಣಗಳಿಂದ ಪರಭಾರೆ ಮಾಡಲು ನಿಷೇಧಿಸಲಾಗಿದೆ.

ಈ ಆದೇಶವನ್ನು ಧಿಕ್ಕರಿಸಿ, ಈ ಕೆಳಕಂಡ ಸ್ಥಿರಾಸ್ತಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಮಾಡಿದ್ದನ್ನು ಸ್ವೀಕರಿಸಿದ್ದಲ್ಲಿ ಅದಕ್ಕೆ ಅವರೇ ಸ್ವಂತ ಜವಾಬ್ದಾರರಾಗಿರುತ್ತಾರೆ.

**ಅನುಬಂಧ**

**ಮುಟ್ಟುಗೋಲು ಹಾಕಿಕೊಂಡಿರುವ ಸ್ಥಿರಾಸ್ತಿಗಳ ವಿವರ:**

| ಕ್ರಮ ಸಂಖ್ಯೆ | ಸ್ಥಿರಾಸ್ತಿಗಳ ವಿವರ | ಖಾತೆ ನಂ. | ವಿಸ್ತೀರ್ಣ | ಸ್ಥಳ |
|---|---|---|---|---|
| (1) | ಖಾಲಿ ನಿವೇಶನ ವಾರ್ಡ್ ನಂ.4 ರ ಡಿವಿಜನ್ ನಂ.1ರಲ್ಲಿ ರಿಜಿಸ್ಟರ್ಡ್ ನಂ. 801:2003-04 ದಿನಾಂಕ:23.06.2003 | 1887:1750 | 38x17 | ದೇವನಹಳ್ಳಿ ಟೌನ್ ತಾಲ್ಲೂಕು ಕಛೇರಿ ರಸ್ತೆ. |

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:29.12.2003ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ,
ದೊಡ್ಡಬಳ್ಳಾಪುರ.

ಪಿ.ಆರ್.169

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮ 71 (ಎ) ಎರಡನೇ ತಿದ್ದುಪಡಿ 1976ರ ಪ್ರಕಾರ**

**ಸಂಖ್ಯೆ: ಎಫ್‌ಓಸಿ-ವಾಹನ-ಅಮು-ಸಿಆರ್-2/2003-04, ದಿನಾಂಕ:31ನೇ ಡಿಸೆಂಬರ್, 2003**

**ವಿಷಯ:** ಶ್ರೀಗಂಧ ಹಾಗೂ ಇತರೇ ಅರಣ್ಯೋತ್ಪತ್ತಿಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುವ ಕುರಿತು.

**ಉಲ್ಲೇಖ:** ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) (2ನೇ ತಿದ್ದುಪಡಿ) 1976ರ ಪ್ರಕಾರ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಬಗ್ಗೆ ಈ ಕಛೇರಿ ನ್ಯಾಯಾಲಯದಿಂದ ಹೊರಡಿಸಿದ ಆದೇಶದ ಸಂಖ್ಯೆ: ಹಾಗೂ ದಿನಾಂಕ:

1) ಎಫ್‌ಓಸಿ- ಸಿಓಎನ್-ಸಿಆರ್- 7/98-99/16.07.2003
2) ಎಫ್‌ಓಸಿ- ಸಿಓಎನ್-ಸಿಆರ್- 18/02-03/19.12.2002
3) ಎಫ್‌ಓಸಿ- ಸಿಓಎನ್-ಸಿಆರ್- 29/02-03/31.12.2003
4) ಎಫ್‌ಓಸಿ- ಸಿಓಎನ್-ಸಿಆರ್- 1/03-04/26.09.2003
5) ಎಫ್‌ಓಸಿ- ಸಿಓಎನ್-ಸಿಆರ್- 3/03-04/26.09.2003
6) ಎಫ್‌ಓಸಿ- ಸಿಓಎನ್-ಸಿಆರ್- 6/03-04/26.09.2003
7) ಎಫ್‌ಓಸಿ- ಸಿಓಎನ್-ಸಿಆರ್- 7/03-04/26.09.2003
8) ಎಫ್‌ಓಸಿ- ಸಿಓಎನ್-ಸಿಆರ್- 14/03-04/31.12.2003

ಈ ವಿಭಾಗದಲ್ಲಿ ಶ್ರೀಗಂಧ ಹಾಗೂ ಇತರೇ ಅರಣ್ಯೋತ್ಪತ್ತಿ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963 ನಿಯಮ 71(ಎ) ತದನಂತರ ಆದ ತಿದ್ದುಪಡಿಗಳಿಗನುಸಾರವಾಗಿ ಈ ಕಛೇರಿ ನ್ಯಾಯಾಲಯದಲ್ಲಿ ನಡುವಳಿಕೆಗಳನ್ನು ನಡೆಸಿ ಉಲ್ಲೇಖ ಪತ್ರ 1 ರಿಂದ 8ರವರೆಗೆ ಹೊರಡಿಸಿದ ಆದೇಶದಂತೆ ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧದ ತುಂಡುಗಳು ಮತ್ತು ಅರಣ್ಯೋತ್ಪತ್ತಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಬಗ್ಗೆ ಆದೇಶ ಹೊರಡಿಸಿರುತ್ತದೆ. ಈ ಬಗ್ಗೆ ಕರ್ನಾಟಕ ರಾಜ್ಯ ಪತ್ರ ಹಾಗೂ ದೈನಿಕ ಪತ್ರಿಕೆಗಳಲ್ಲಿಯೂ ಸಹ ಪ್ರಚಾರಪಡಿಸಿ ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಅರಣ್ಯ ಕಾಯ್ದೆ 1963 ಕಲಂ 71(ಎ) ಮತ್ತು (ಬಿ) ಪ್ರಕಾರ ಈ ನ್ಯಾಯಾಲಯದಿಂದ

ಉಲ್ಲೇಖದಲ್ಲಿ ಹೊರಡಿಸಿದ ಆದೇಶದ ಮೇರೆಗೆ ಯಾರೂ ಸಹ ಇದುವರೆವಿಗೂ ಮೇಲ್ಮನವಿ ಮಾಡಿಕೊಂಡಿಲ್ಲ. ಆದ್ದರಿಂದ ಮೇಲಿನ ದಿನಾಂಕದಂದು ಈ ನ್ಯಾಯಾಲಯದಿಂದ ಹೊರಡಿಸಿದ ಆದೇಶವು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71(ಎಫ್) ರ ಪ್ರಕಾರ ಸ್ಥಿರಗೊಂಡು ಅಂತಿಮ ಆದೇಶವಾಗಿರುತ್ತದೆ. ಇದರಂತೆ ಈ ಕೆಳಕಂಡ ವಾಹನಗಳ ಮೇಲೆ ಯಾವ ಹಕ್ಕು ಇರುವುದಿಲ್ಲವೆಂದು ಈ ಮೂಲಕ ದೃಢೀಕರಿಸಿದೆ.

| ಕ್ರ. ಸಂ. | ವಾಹನದ ಮಾದರಿ | ವಾಹನದ ಸಂಖ್ಯೆ | ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಂಡ ಶ್ರೀಗಂಧದ ತುಂಡು ಅಥವಾ ಇತರೆ ಅರಣ್ಯ ಉತ್ಪತ್ತಿಯ ವಿವರ (ಘನ ಮೀಗಳಲ್ಲಿ) | ಇಂಜಿನ್ ಸಂಖ್ಯೆ | ಚಾಸ್ಸಿ ಸಂಖ್ಯೆ |
|---|---|---|---|---|---|
| 1 | 2 | 3 | 4 | 5 | 6 |
| 1. | ಆಟೋರಿಕ್ಷ | ಕೆಎ-18-4374 | ಸಾಗುವಾನಿ ತುಂಡು 4=0.180 | 22 ಇ-ಬಿಸಿಎಂ-12808 | 22 ಸಿಬಿಸಿಎಂ 12733 |
| 2. | ಬಜಾಜ್ ಎಂ-80 ಸ್ಕೂಟರ್ | ಕೆಎ-06-ಜೆ-1301 | ಬೀಟೆ ಸೈಜು 7=0.044 ಎಂ3 | - | 16095-ಎಂ-42384 |
| 3. | ಬಜಾಜ್ ಎಂ-80 ಮೇಜರ್ ದ್ವಿಚಕ್ರ ವಾಹನ | ಕೆಎ-18-ಜೆ-7314 | ಶ್ರೀಗಂಧ 10 ಕೆ.ಜಿ. 500 ಗ್ರಾಂ | ಎಫ್ಎಎಂ-ಬಿ ಹೆಚ್‌ಜಿ-13805 | ಎಫ್ಎಎಫ್-ಬಿಹೆಚ್‌ಜಿ- 14097 |
| 4. | ಹಿರೋ ಹೋಂಡಾ ಬೈಕ್ | ಕೆಎ-17-ಇ-8889 | ಶ್ರೀಗಂಧದ ಬುಡ ಬೇರು 9 ಕೆ.ಜಿ. | ಹೆಚ್-10-ಇ-723477 | ಹೆಚ್-12- ಎಫ್-090331 |
| 5. | ಸುಜುಕಿ ಮ್ಯಾಕ್ಸ್ 100- ಮೋಟಾರ್ ಸೈಕಲ್ | ಸಿಎನ್‌ವೈ 1820 | ಶ್ರೀಗಂಧದ ತುಂಡು 31=10 ಕೆ.ಜಿ. | 3502-ಎಂ-005179 | ಬಿಇ-11-ಎ-109313 |
| 6. | ಬಜಾಜ್ ಸ್ಕೂಟರ್ | ಸಿಟಿಎಸ್ 4246 | 6 ಶ್ರೀಗಂಧದ ತುಂಡು 7=6.500 ಕೆ.ಜಿ. | 06-ಇ-8107 | 188079 |
| 7. | ಟಿ.ವಿ.ಎಸ್. ಸ್ಕೂಟಿ | ಕೆಎ-05-ವಿ-2459 | ಶ್ರೀಗಂಧದ ಬೇರು ಚಕ್ಕೆ 10 ಕೆ.ಜಿ. | ಕೆ-97-ಬಿಎಂ-101044 | ಕೆ-97-ಎಫ್-0099876 |
| 8. | ಬಜಾಜ್ ಸ್ಕೂಟರ್ | ಸಿಟಿಡಿ 2545 | ಶ್ರೀಗಂಧದ ಚಕ್ಕೆ ಬೇರು 8 ಕೆ.ಜಿ. | 10-ಇ-065246 | - |

ಈ ಆದೇಶವನ್ನು ದಿನಾಂಕ: 31.12.2003 ರಂದು ಈ ಕಛೇರಿ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತದೆ.

**ಸೀಮಾ ಗರ್ಗ್**
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.170

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಶ್ರೀ ಸಿದ್ದಪ್ಪ ರವರ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:272ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಡಿಸಿಬಿ:ಕಗಗು 272:2003-04:2513:ದಿನಾಂಕ:21.07.2003.
2. 2002-03ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದ ಸರ್ವೆ ನಂ.402ರಲ್ಲಿ ಶ್ರೀ ಸಿದ್ದಪ್ಪ ರವರಿಗೆ 2-00 ಎಕರೆಗೆ ದಿನಾಂಕ:29.09.1999 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರಗಳನ್ನು ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,37,090-00ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39ರಂತೆ ಸರ್ಕಾರದ ಅಧಿಸೂಚನೆ-III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

ಆದೇಶ

ಸಂಖ್ಯೆ:ಗಭೂಇ:ಡಿಸಿಬಿ:ಕಗಗು:272:2002-03/17395 ದಿನಾಂಕ: 3ನೇ ಫೆಬ್ರವರಿ, 2004

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಶಿವನಹಳ್ಳಿ ಗ್ರಾಮದ ಸರ್ವೆ ನಂ. 402ರಲ್ಲಿ 2-00 ಎಕರೆಗೆ ಮಲ್ಟಿ ಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:272ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ.

ಪಿ.ಆರ್.171

**PROCEEDINGS OF THE OFFICE OF THE COMML. TAX OFFICER 2 & 3 CIRCLE, BANGALORE**

**Present:** Smt. T.K. Manjula
Comml. Tax Officer,
2 & 3 circle, Bangalore.

**Name of the dealrer & Address:** M/s. Naga Enterprises
No.46, Opposit Chandra Bhavan,
S J P Road, Bangalore.

**KST & CST No:** 75531616/ 75581619

**Sub:** Invalidation of statutory forms like Form-37 declarations forms bearings Sl.No. from 72526 to 72535 and C-Forms bearing Sl.No. from 24G 705394 to 24G 705398, issued to M/s Naga Enterprises, No.46, Opp. Chandra Bhavan, S J P Road, Bangalore-Reg.

**Preamble:**

M/s Naga Enterprises, were registered under the provisions of both KST Act 1957 and CST Act 1956 w.e.f. 24.04.97 in this office. The assessee have taken ten leaves of Form-37 bearing No.72526 to 72535 and five leaves of C-Forms bearing No.24G 705394 to 24G 705398 from this office on 31.05.1997 and 14.05.1997 respectively. He has filed monthly returns upto the month of December, 97 declaring only sales T.O of Rs. 13,800-00 with tax effect of Rs. 1,655-00. He has also filed Form-37 utilisation statement disclosing that he has purchased cement worth Rs. 96,320-00 against Ten Form-37 forms. Subsequently, the assessee have stopped filing the returns on enquiry and other information as available on the records it is found that the dealer has left the business premises without leaving his where abouts. He has not surrendered any Form-37 declarations forms or C-Forms taken from this office as above.

This office has also received information from the officers of this department that the assessee have issued Form-37 declarations to the following dealers.

| | Name of the Dealer from whom purchases | Form 37 No. | Bill No. Dt: | Amount in Rs. |
|---|---|---|---|---|
| | 97-98 | | | |
| 1. | Orient Cement No.397, Harinivas 14th Cross, Wilson Garden, Bangalore. | 72531 and 72532 | 45 bills | 40,26,000-00 |
| | 98-99 | | | |
| 2. | Manjunatha Enterprises Bangalore O/O DCCT 34 | 72527 | Bill No. & date Not disclosed | 81,04,110-00 |
| 3. | Kesoram Cements Bangalore, O/O DCCT 12 | 7253 | 44 bills | 9,66,500-00 |

Therefore it is clear that the assessee have misused the Statutory forms and Form 37 utilisation statement filed is bogus. Under these circumstances it is decided to invalid the following statutory forms to prevent the misuse of the same and loss to the Government revenue. Hence the following order.

**Order No. CTO 2&3/BCD III/ T.No.277/2003-04, Dated:16th January, 2004**

In view of the above I Smt. T.K. Manjula, C.T.O. 2&3 Circle, BCD III, Bangalore, declare that the Form 37 bearing No 72526 to 72535 Dated:14-05.97 and Form-C bearing No. from 24G 705394 to 24G 705398 Dated: 03.05.1997 are obsolete and INVALID

**FORMAT**

1. Assessing Authority : C.T.O. 2&3 Circle, BCD III, Abhaya Complex, Sheshadripuram Bangalore.
2. Description of Forms : 1) Ten Form-37 declarations
   2) Five Form-C declarations
3. Machine Sl.No. of Forms : Form 37 No. From 72526 to 72535
   Form C No. From 24G 705394 to 24G 705398
4. KST/CST Number : KST No. 75531616
   CST No. 75581619

PR-172

Commercial Tax Officer,
II & III Circle, Bangalore.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ನಿಧಿ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬೆಳಗಾವಿ**

**ಪ್ರಕರಣ ಸಂಖ್ಯೆ: ಕಾಪಕಾ/ಎಸ್‌ಆರ್-117:02, ದಿನಾಂಕ:2ನೇ ಜನವರಿ, 2004**

**ಅರ್ಜಿದಾರರು**
1. ಶ್ರೀ ಪ್ರಸಾದ ತಂದೆ ರಾಧಾಕಿಶನ್ ಮತ್ತು
2. ಶ್ರೀಮತಿ ಸಿಕಲುದೇವಿ ಕೋಂ ಶ್ರೀ ಪ್ರಸಾದ
3. ಶ್ರೀಮತಿ ಮಾಲತಿದೇವಿ ಕೋಂ ಪರಶುರಾಮ
   ವಾಸ:ಕಶಿಲಾ ಪೋ:ಅಸಾವ್ ಜಿ:ಶಿವಾನ, ಬಿಹಾರ ರಾಜ್ಯ.

**ವಿರುದ್ಧ ಪ್ರತಿವಾದಿಗಳು**
1. ವ್ಯವಸ್ಥಾಪಕರು,
   ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ
   ನಿಯಮಿತ, ತೋರಗಲ್: ತಾ: ರಾಮದುರ್ಗ
2. ದಿ-ಮ್ಯಾನೇಜರ್,
   ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ.,
   ಕ್ಲಬ್ ರೋಡ್, ಬೆಳಗಾವಿ.

**ಪ್ರಕರಣ**

ಶ್ರೀ ಪ್ರಸಾದ ರಾಧಾಕಿಶನ್, ಶ್ರೀಮತಿ ಸಿಕಲುದೇವಿ ಕೋಂ ಪ್ರಸಾದ ಮತ್ತು ಶ್ರೀಮತಿ ಮಾಲತಿದೇವಿ ಕೋಂ ಪರಶುರಾಮ ಇವರುಗಳಾದ, ತಾವು ಮೃತ ಶ್ರೀ ಪರಶುರಾಮ ಪ್ರಸಾದ ಇವರ ವಾರಸುದಾರರು ಎಂದೂ ಅವರ ಸಾವಿಗಾಗಿ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಪರಶುರಾಮ ಪ್ರಸಾದ ಇವರು ಒಂದನೇ ಪ್ರತಿವಾದಿಗಳಾದ ವ್ಯವಸ್ಥಾಪಕರು, ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ, ತೋರಗಲ್ ಇವರ ಕಾರ್ಖಾನೆಯಲ್ಲಿ ವೀಲ್ ವರ್ಕಿಂಗ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಬಿ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಸ್. ಪಾಟೀಲ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ಪರಿಹಾರ ನಿಧಿ ಆಯುಕ್ತರು,
ಉಪ ವಿಭಾಗ-2, ಬೆಳಗಾವಿ.

ಪಿ.ಆರ್.173

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಆದೇಶ ಸಂಖ್ಯೆ:ಇಎಕ್ಸ್‌ಇ/ಸಿಆರ್‌ಎಂ/ಡಿಟಿಸಿಆರ್/162/2000-01 ದಿನಾಂಕ:31ನೇ ಡಿಸೆಂಬರ್, 2003**

**ಪ್ರಕರಣದ ಸಂಖ್ಯೆ:** ಅಬಕಾರಿ ಸಬ್‌ಇನ್‌ಸ್ಪೆಕ್ಟರ್, ಉಪ ವಿಭಾಗ, ಬೆಳಗಾಂವ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ:8/2000-01 ದಿನಾಂಕ:25.10.2000.

**ಉಪಸ್ಥಿತರು:** ಶ್ರೀ ಪಿ.ಎನ್. ಮುರಗೋಡ
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಫಿರ್ಯಾದಿ:**
ಶ್ರೀ ಜಿ.ಜಿ. ಉಪರಿ
ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಉಪವಿಭಾಗ,
ಬೆಳಗಾಂವ.

**ವಿರುದ್ಧ**

**ಆರೋಪಿತರು:**
1. ವಸಂತ ಮುರಳಿಧರ ಪರ್ವತಿ
   ಮ.ನಂ.36, ರಾಜನಗರ, ಹುಬ್ಬಳ್ಳಿ -ವಾಹನ ಮಾಲೀಕರು.
2. ಜಂಬಯ್ಯ ನಾಗಯ್ಯ ಚಿಕ್ಕಮಠ
   ಸಾ: ಗಂಖ್ಯಾಪೂರ, ತಾ:ಕಲಘಟಗಿ, ಜಿ:ಧಾರವಾಡ-ವಾಹನ ಚಾಲಕ.

**ಪ್ರಸ್ತಾವನೆ:**

ದಿನಾಂಕ: 25.10.2000ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಜಿ.ಜಿ. ಉಪರಿ, ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಉಪ ವಿಭಾಗ, ಬೆಳಗಾಂವ ಇವರು ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಬೆಳಗಾಂವ ಹಾಗೂ ಸಿಬ್ಬಂದಿ ಮತ್ತು ಇಬ್ಬರು ಪಂಚರೊಂದಿಗೆ ರಾಷ್ಟ್ರೀಯ ಹೆದ್ದಾರಿ ನಂ.4 ರ ಅಲಾರವಾಡ ಊರಿಗೆ ಹೋಗುವ ಕ್ರಾಸ್‌ನಲ್ಲಿ ರಾತ್ರಿ 9.00 ಗಂಟೆಯ ಸುಮಾರಿಗೆ ರಸ್ತೆ ಕಾವಲು ನಡೆಸುತ್ತಿದ್ದಾಗ ಹುಬ್ಬಳ್ಳಿ ಕಡೆಯಿಂದ ಬರುತ್ತಿದ್ದ ಮೆಟಡೋರ್ ವಾಹನವನ್ನು ಸಂಶಯದ ಮೂಲಕ ನಿಲ್ಲಿಸಿ ನೋಡಲಾಗಿ ಅದರ ನಂ.ಸಿಎನ್‌ಆರ್-1791 ಇತ್ತು ಅದನ್ನು ತಪಾಸಿಸಿ ನೋಡಲಾಗಿ ಅದರಲ್ಲಿ ರಟ್ಟಿನ ಪೆಟ್ಟಿಗೆಗಳ ದಾಸ್ತಾನು ಕಂಡು ಬಂದಿತು. ಸದರಿ ರಟ್ಟಿನ ಪೆಟ್ಟಿಗೆಗಳನ್ನು ತಪಾಸಿಸಿ, ನೋಡಲಾಗಿ ಅದರಲ್ಲಿ ಮದ್ಯದ ಬಾಟಲುಗಳು ಇದ್ದದ್ದು ಕಂಡು ಬಂದಿತು. ಸದರಿ ಮದ್ಯದ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಅಥವಾ ಯಾವುದಾದರೂ ದಾಖಲಾತಿಗಳು ಇವೆಯೋ ಎಂದು ವಾಹನ ಚಾಲಕನನ್ನು ಕೇಳಲಾಗಿ ಅಂತಹ ಯಾವುದೇ ದಾಖಲಾತಿಗಳು ಇಲ್ಲ ಎಂದು ತಿಳಿಸಿದನು. ಸದರಿ ಪೆಟ್ಟಿಗೆಗಳನ್ನು ತೆರೆದು ನೋಡಲಾಗಿ ಅದರಲ್ಲಿ ಈ ಕೆಳಗಿನಂತೆ ಮದ್ಯದ ಬಾಟಲಿಗಳು ಇದ್ದದ್ದು ಕಂಡು ಬಂದಿತು.

1. ರಾಜಾ XXX ರಮ್-74 X 48 X 180 ಎಂ.ಎಲ್-3552 ಬಾಟಲಿಗಳು
2. ರಾಜ ವ್ಹಿಸ್ಕಿ-14 X 48 X 180 ಎಂ.ಎಲ್-672 ಬಾಟಲಿಗಳು
3. ರಾಜಾ ಜಿನ್-20 X 48 X 180 ಎಂ.ಎಲ್-960 ಬಾಟಲಿಗಳು

-108 X 48 X 180 ಎಂ.ಎಲ್-5184 ಬಾಟಲಿಗಳು

ಸದರಿ ವಾಹನ ಚಾಲಕನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ಜಂಬಯ್ಯ ನಾಗಯ್ಯ ಚಿಕ್ಕಮಠ, ಗಂಝ್ಯಾಪುರ, ತಾ: ಕಲಘಟಗಿ, ಜಿ: ಧಾರವಾಡ ಎಂದು ಹೇಳಿದನು. ಸದರಿ ವಾಹನದಲ್ಲಿ ಸರ್ಕಾರಕ್ಕೆ ಕರಕೊಡದ ಮದ್ಯದ ಬಾಟಲಿಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದು ಖಚಿತವಾಗಿದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ ಮದ್ಯ ಹಾಗೂ ವಾಹನವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ನಂತರ ಪ್ರತಿಯೊಂದು ಬ್ರ್ಯಾಂಡಿನಿಂದ 9 ಬಾಟಲಿಗಳಂತೆ ಒಟ್ಟು 27 ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಸೀಲು ಮಾಡಿ ತಮ್ಮ ಹಾಗೂ ಪಂಚರ ಸಹಿ ಚೀಟಿಗಳನ್ನು ಅಂಟಿಸಿದ್ದಾರೆ. ನಂತರ ಈ ಬಗ್ಗೆ ರಾತ್ರಿ 9.00 ರಿಂದ 10.30 ರವರೆಗೆ ಪಂಚನಾಮೆಯನ್ನು ತಯಾರಿಸಿದ್ದಾರೆ. ನಂತರ ಆರೋಪಿ ಹಾಗೂ ಜಪ್ತಾದ ಮುದ್ದೆಮಾಲುಗಳೊಂದಿಗೆ ಅಬಕಾರಿ ಕಛೇರಿಗೆ ಬಂದು ಸರ್ಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ವಾಹನ ಚಾಲಕನ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 38(ಎ) ಹಾಗೂ 43ರ ಪ್ರಕಾರ ಫಿರ್ಯಾದನ್ನು ಸಲ್ಲಿಸಿ ಗುನ್ನೆ ನಂ.8/2000-01 ದಿನಾಂಕ:25.10.2000ನ್ನು ದಾಖಲಿಸಿರುತ್ತಾರೆ. ವಾಹನ ಚಾಲಕನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತಾರೆ. ಸದರಿ ಮುದ್ದೆಮಾಲುಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿದ್ದಾರೆ.

ನಂತರ ಫಿರ್ಯಾದಿಯವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಧಾರವಾಡ ಇವರು ಬರೆದ ದಿನಾಂಕ:15.02.2001ರ ಪತ್ರವನ್ನು ಸಲ್ಲಿಸಿದ್ದಾರೆ. ಸದರಿ ಪತ್ರದಿಂದ ವಾಹನ ಮಾಲಿಕರ ಹೆಸರು ಶ್ರೀ ವಸಂತ ಮುರಳಿಧರ ಪರ್ವತಿ, ಮನೆ ನಂ. 36, ರಾಜನಗರ, ಹುಬ್ಬಳ್ಳಿ ಇದ್ದುದಾಗಿ ಕಂಡು ಬರುತ್ತದೆ.

ರಸಾಯನ ತಜ್ಞರು ತಮ್ಮ ವರದಿ ನಂ.ಸಿಸಿಎಲ್/5948/2000 ದಿನಾಂಕ:18.11.2000ನ್ನು ನೀಡಿದ್ದು ಸದರಿ ವರದಿಯಂತೆ ವಶಪಡಿಸಿಕೊಂಡ ಬಾಟಲುಗಳಲ್ಲಿ ಮದ್ಯಸಾರದ ಅಂಶ ಇರುವುದಾಗಿಯೂ ಹಾಗೂ ಸದರಿ ಮದ್ಯ ಮಾನವ ಸೇವನೆಗೆ ಯೋಗ್ಯವಿದೆ ಎಂದು ತಿಳಿಸಿದ್ದಾರೆ.

ನಂತರ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಯಂತೆ ನೋಟೀಸುಗಳನ್ನು ನೀಡಲಾಯಿತು. ಆದರೆ ವಾಹನ ಮಾಲಿಕರ ಪತ್ತೆಯಾಗದ ಕಾರಣ ಸದರಿ ಕಾರಣ ಕೇಳಿ ನೋಟೀಸು ವಾಹನ ಮಾಲಿಕರಿಗೆ ಜಾರಿಯಾಗಲಿಲ್ಲ. ಆದ್ದರಿಂದ ಸದರಿ ನೋಟೀಸನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಕ್ರಮ ಕೈಗೊಂಡದ್ದರಿಂದ ಸದರಿ ನೋಟೀಸು ಕರ್ನಾಟಕ ರಾಜ್ಯ ಪತ್ರದ 06.03.2003ರ ಸಂಚಿಕೆಯಲ್ಲಿ ಪುಟ 343, ಭಾಗ 3ರಲ್ಲಿ ಪ್ರಕಟವಾಯಿತು. ಆದಾಗ್ಯೂ ಮಾಲಿಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಥವಾ ತಮ್ಮ ಪರವಾಗಿ ಯಾವುದೇ ವಕೀಲರನ್ನು ನೇಮಿಸಿರುವುದಿಲ್ಲ.

ನಂತರ ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸರಕಾರದ ಪರವಾಗಿ ಫಿರ್ಯಾದಿ ಹಾಗೂ ಒಬ್ಬ ಪಂಚನ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ 9 ದಾಖಲಾತಿಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನೆಗಳು ಈ ಕೆಳಗಿನಂತೆ ಇರುತ್ತವೆ.

1. ದಿನಾಂಕ:25.10.2000 ರಂದು ವಾಹನ ಮೆಟಡೋರ್ ಸಂ. ಸಿಎನ್‌ಆರ್-1791ದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಲಾಗಿದೆಯೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲಿಕರು ಸಿದ್ಧಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇಯ ಅಂಶವನ್ನು ಗುಣಾತ್ಮಕವಾಗಿ, ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ಇವರು ಪಂಚಸಾಕ್ಷಿದಾರರಿದ್ದು, ಇವರ ಹೆಸರು ಶ್ರೀ ರಾಮಚಂದ್ರ ವೈಜು ಜಾಧವ, ಬೆಳಗಾಂವ ಇರುತ್ತದೆ. ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ:12.06.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ದಿನಾಂಕ:25.10.2000 ರಂದು ರಾತ್ರಿ 8.00 ಗಂಟೆಗೆ ಸದರಿಯವರು ಅಬಕಾರಿ ಸಬ್ ಇನ್ಸ್‌ಸ್ಪೆಕ್ಟರ್, ಉಪ ವಿಭಾಗ, ಬೆಳಗಾಂವ ಹಾಗೂ ಸಿಬ್ಬಂದಿ ಮತ್ತು ಇನ್ನೊಬ್ಬ ಪಂಚನೊಂದಿಗೆ ರಸ್ತೆ ಗಸ್ತು ಮಾಡಲು ಅಲಾರವಾಡ ಕ್ರಾಸ್ ಹತ್ತಿರ ಹೋಗಿದ್ದಾಗಿ ತಿಳಿಸಿದ್ದಾರೆ. ಆಗ ರಾತ್ರಿ 9.00 ಗಂಟೆಗೆ ಒಂದು ವಾಹನ ನಂ. ಸಿಎನ್‌ಆರ್-1791 ಹುಬ್ಬಳ್ಳಿ ಕಡೆಯಿಂದ ಬಂದಾಗ ಅದನ್ನು ಸಂಶಯದಿಂದ ಅಬಕಾರಿ ಅಧಿಕಾರಿಗಳು ಕೈ ಮಾಡಿ ನಿಲ್ಲಿಸಿ ಸದರಿಯವರ ಸಮಕ್ಷಮದಲ್ಲಿ ತಪಾಸಣೆ ಮಾಡಿ ನೋಡಲಾಗಿ ಅದರಲ್ಲಿ 108 ಪೆಟ್ಟಿಗೆಗಳಿದ್ದು, ಪ್ರತಿಯೊಂದರಲ್ಲಿ 180 ಎಂ.ಎಲ್. ದ 48 ಬಾಟಲಿಗಳಿದ್ದು, ರಾಜಾ ರಮ್, ರಾಜಾ ವಿಸ್ಕಿ ಹಾಗೂ ರಾಜಾ ಜಿನ್‌ಗಳು ಇದ್ದುದಾಗಿ ತಿಳಿಸಿದ್ದಾರೆ. ಸದರಿ ಮದ್ಯದ ಪೆಟ್ಟಿಗೆಗಳನ್ನು ಸಾಗಿಸಲು ವಾಹನ ಚಾಲಕನ ಹತ್ತಿರ ಯಾವುದೇ ಅಧಿಕೃತ ದಾಖಲಾತಿಗಳು ಇರಲಿಲ್ಲವೆಂದು ಹೇಳಿದ್ದಾರೆ. ನಂತರ ಅಬಕಾರಿ ಸಬ್ ಇನ್ಸ್‌ಸ್ಪೆಕ್ಟರ್ ರವರು 27 ಬಾಟಲಿಗಳನ್ನು ಮಾದರಿಯಾಗಿ ರಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳ ಬಾಯಿ ಕಟ್ಟಿ ಸೀಲು ಮಾಡಿ ಸದರಿಯವರು ಹಾಗೂ ಅಧಿಕಾರಿಗಳು ಸಹಿ ಮಾಡಿದ ಚೀಟಿ ಅಂಟಿಸಿದ್ದಾಗಿ ತಿಳಿಸಿದ್ದಾರೆ. ನಂತರ ಚಾಲಕನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ಜಂಬಯ್ಯ ನಾಗಯ್ಯ ಚಿಕ್ಕಮಠ ಎಂದು ಹೇಳಿದ್ದಾಗಿ ತಿಳಿಸಿ ಈ ಕುರಿತು ಅವರ ಸಮಕ್ಷಮದಲ್ಲಿ ವಿವರವಾದ ಪಂಚನಾಮೆಯನ್ನು ಬರೆದು ವಾಹನ ಹಾಗೂ ಮದ್ಯವನ್ನು ಜಪ್ತಿ ಮಾಡಿಕೊಂಡಿದ್ದಾಗಿಯೂ ಹಾಗೂ ಆರೋಪಿಯನ್ನು ದಸ್ತಗಿರಿ ಮಾಡಿದ್ದಾಗಿ ತಿಳಿಸಿದ್ದಾರೆ. ನಂತರ ಬರೆದ ಪಂಚನಾಮೆಗೆ ಸದರಿಯವರು ಸಹಿ ಮಾಡಿದ್ದಾಗಿಯೂ ಸದರಿ ಪಂಚನಾಮೆ ಕಾರ್ಬನ್ ಪ್ರತಿ ನಿಪಿ-1 ಎಂದು ಗುರುತಿಸಿದ್ದಾಗಿಯೂ ಹಾಗೂ ಅದರಲ್ಲಿಯ ಅವರ ಸಹಿ ನಿಪಿ-1(ಎ) ಅಂತಾ ಗುರುತಿಸಿದ್ದಾಗಿಯೂ ಹೇಳಿದ್ದಾರೆ. ಇಲಾಖೆಯ ವಶದಲ್ಲಿದ್ದ ವಾಹನವನ್ನು ನೋಡಿ ಗುರುತಿಸಿದ್ದಾಗಿ ಹೇಳಿದ್ದಾರೆ. ಅದನ್ನು ಮುದ್ದೆಮಾಲು-1 ಎಂದು ಗುರುತಿಸಲಾಯಿತು. ವಾಹನ ಮಾಲಿಕರು ಗೈರು ಹಾಜರಿದ್ದುದ್ದರಿಂದ ಹಾಗೂ ಅವರು ವಕೀಲರನ್ನು ನೇಮಿಸಿಕೊಂಡಿಲ್ಲವಾದ್ದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಪ್ರಾ.ಸಾ-2 ರಾದ ಶ್ರೀ ಗಣೇಶ ಗಂಗಪ್ಪ ಉಪರಿ, ಅಬಕಾರಿ ಸಬ್ ಇನ್ಸ್‌ಸ್ಪೆಕ್ಟರ್ (ನಿವೃತ್ತ) ಇವರು ಈ ಪ್ರಕರಣದ ಫಿರ್ಯಾದುದಾರರಿದ್ದು ಸದರಿಯವರು ದಿನಾಂಕ:11.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ ಸದರಿಯವರು ನವೆಂಬರ್-96 ರಿಂದ ಆಗಸ್ಟ್-2001ರ ವರೆಗೆ ಬೆಳಗಾಂವ ಉಪ ವಿಭಾಗದಲ್ಲಿ ಅಬಕಾರಿ ಸಬ್ ಇನ್ಸ್‌ಸ್ಪೆಕ್ಟರ್‌ರಾಗಿ ಕಾರ್ಯನಿರ್ವಹಿಸಿದ್ದಾಗಿ ತಿಳಿಸಿ ದಿನಾಂಕ:25.10.2000 ರಂದು ಪಂಚರು ಹಾಗೂ ಸಿಬ್ಬಂದಿಯವರೊಂದಿಗೆ ರಾಷ್ಟ್ರೀಯ ಹೆದ್ದಾರಿ ನಂ.4 ರ ಮೇಲೆ ಅಲಾರವಾಡ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಿದ್ದಾಗ ಹುಬ್ಬಳ್ಳಿ ಕಡೆಯಿಂದ ಬರುತ್ತಿದ್ದ ಮೆಟಡೋರ್ ನಂ.ಸಿಎನ್‌ಆರ್-1791 ನ್ನು ನಿಲ್ಲಿಸಿ ತಪಾಸಣೆ ಮಾಡಲಾಗಿ ಅದರಲ್ಲಿ 108 ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್. ದ 48 ಬಾಟಲಿಗಳು ಅಂದರೆ ಒಟ್ಟು 5184 ಬಾಟಲು ರಾಜಾ ರಮ್, ರಾಜಾ ವಿಸ್ಕಿ ಹಾಗೂ ರಾಜಾ ಜಿನ್ ಬ್ರ್ಯಾಂಡ್‌ನ ಮದ್ಯ ಕಂಡು ಬಂದಿದ್ದಾಗಿ ತಿಳಿಸಿದ್ದಾರೆ. ಸದರಿ ಮದ್ಯವನ್ನು ಸಾಗಾಟ ಮಾಡಲು ವಾಹನ ಚಾಲಕನ ಹತ್ತಿರ ಪರ್ಮಿಟ್ ಇರಲಿಲ್ಲವೆಂದು ತಿಳಿಸಿದ್ದಾರೆ. ಸದರಿ ವಾಹನ ಚಾಲಕನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರು ಜಂಬಯ್ಯ ನಾಗಯ್ಯ ಚಿಕ್ಕಮಠ ಎಂದು ಹೇಳಿದ್ದಾಗಿ ತಿಳಿಸಿದ್ದಾರೆ. ನಂತರ ಸದರಿಯವರು ಪ್ರತಿಯೊಂದು ನಮೂನೆಯ 9 ಬಾಟಲಿಗಳಂತೆ ಒಟ್ಟು 27 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ನಂತರ ಪಂಚರ ಸಮಕ್ಷಮ ಪಂಚನಾಮೆಯನ್ನು ಬರೆದು ವಾಹನ ಹಾಗೂ ಮದ್ಯವನ್ನು ಜಪ್ತಿ ಮಾಡಿ ಆರೋಪಿಯನ್ನು ದಸ್ತಗಿರಿ ಮಾಡಿದ್ದಾಗಿ ತಿಳಿಸಿದ್ದಾರೆ. ನಿಪಿ-1 ಪಂಚನಾಮೆಯ ದೃಢೀಕೃತ ಪ್ರತಿ ಇದ್ದು ನಿಪಿ-1(ಬಿ) ಸದರಿಯವರ ಸಹಿ ಇರುತ್ತದೆ. ಸರ್ಕಾರದ ಪರವಾಗಿ ಫಿರ್ಯಾದಿಯಾಗಿ ಆರೋಪಿಯ ವಿರುದ್ಧ ಫಿರ್ಯಾದಿ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ನಿಪಿ-2 ಅದರ ಪ್ರತಿ ಇದ್ದು ನಿಪಿ-2(ಎ) ಅವರ ಸಹಿ ಇರುತ್ತದೆ. ಸದರಿಯವರು ಅಧಿಕೃತ ಅಧಿಕಾರಿಗಳಿಗೆ ಗುನ್ನೆ ಬಗ್ಗೆ ವರದಿ ಸಲ್ಲಿಸಿದ್ದು, ಅದು ನಿಪಿ-4 ಇದ್ದು ಅದರ ಮೇಲಿನ ಅವರ ಸಹಿ ನಿಪಿ-4(ಎ) ಇರುತ್ತದೆ. ನಿಪಿ-3 ಪ್ರಥಮ ವರ್ತಮಾನದ ಪ್ರತಿಯಾಗಿದ್ದು ನಿಪಿ-3(ಎ) ಅವರ ಸಹಿ ಇರುತ್ತದೆ. ರಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ಬೆಂಗಳೂರಿಗೆ ಕಳಿಸಿ ದಿನಾಂಕ:17.11.2000 ರಂದು ಪ್ರಮಾಣ ಪತ್ರ ಪಡೆದಿದ್ದಾಗಿ ತಿಳಿಸಿದ್ದಾರೆ. ಅದರ ಪ್ರತಿ ನಿಪಿ-5 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-5(ಎ) ಎಂದು ಗುರುತಿಸಿದೆ. ಸದರಿ ವಾಹನದ ಮಾಲಿಕರ ಹೆಸರು/ ವಿಳಾಸ ತಿಳಿಸುವಂತೆ ವಿನಂತಿಸಿ ಆರ್.ಟಿ.ಓ, ಧಾರವಾಡ ಇವರಿಗೆ ಪತ್ರ ಬರೆದಿದ್ದಾಗಿಯೂ ಸದರಿ ವಾಹನ ಮಾಲಿಕರ ಹೆಸರು ವಸಂತ ಮುರಳೀಧರ ಪರ್ವತಿ, ಮ.ನಂ.36, ರಾಜನಗರ, ಹುಬ್ಬಳ್ಳಿ ಅಂತಾ ಇದ್ದು ಸದರಿ ವಾಹನವು ದಿನಾಂಕ: 29.12.2000 ರಿಂದ ಅನುಪಯುಕ್ತತೆಯಲ್ಲಿದೆ ಎಂದು ಆರ್.ಟಿ.ಓ, ಧಾರವಾಡ ಇವರ ಪತ್ರದಲ್ಲಿ ನಮೂದಾಗಿರುವುದಾಗಿ ತಿಳಿಸಿದ್ದಾರೆ. ಎಷ್ಟು ಪ್ರಯತ್ನ ಪಟ್ಟರೂ ಸದರಿ ವ್ಯಕ್ತಿಯು ಸಿಗದಿದ್ದರಿಂದ ಅವರನ್ನು ದಸ್ತಗಿರಿ ಮಾಡಿರುವುದಿಲ್ಲವೆಂದು ತಿಳಿಸಿದ್ದಾರೆ. ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸು ಕರ್ನಾಟಕ ರಾಜ್ಯ ಪತ್ರದ ದಿನಾಂಕ:06.03.2003ರಲ್ಲಿ ಪ್ರಕಟಿಸಲಾಗಿದೆ. ಆರ್.ಟಿ.ಓ, ಧಾರವಾಡ ರವರ ಪತ್ರದ ಪ್ರತಿ ನಿಪಿ-6 ಇದ್ದು ಅದರ ಮೇಲಿನ ಅವರ ಸಹಿಯನ್ನು ನಿಪಿ-6(ಎ) ಮತ್ತು ರಾಜ್ಯ ಪತ್ರದ ಪ್ರತಿಯನ್ನು ನಿಪಿ-7 ಎಂದು ಗುರುತಿಸಲಾಗಿದೆ. ಮಾದರಿ ಮದ್ಯವನ್ನು ಹೊರತುಪಡಿಸಿ ಉಳಿದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾಗಿ ತಿಳಿಸಿದ್ದಾರೆ. ಸದರಿ ಪತ್ರವನ್ನು ನಿಪಿ-8 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-8(ಎ) ಎಂದು ಗುರುತಿಸಲಾಗಿದೆ. ಅಧಿಕೃತ ಅಧಿಕಾರಿಯವರ ಆದೇಶವನ್ನು ನಿಪಿ-9 ಎಂದು ಗುರುತಿಸಲಾಗಿದೆ. ಸದರಿ ಆದೇಶದಂತೆ ಮದ್ಯವನ್ನು ಮಾರಾಟ ಮಾಡಿ ಬಂದ ಹಣವನ್ನು ಸರ್ಕಾರಕ್ಕೆ ಜಮಾ ಮಾಡಿದ್ದಾಗಿ ತಿಳಿಸಿದ್ದಾರೆ. ಶ್ರೀ ಮಾಯಣ್ಣವರ, ಅಬಕಾರಿ ಸಬ್‌ಇನ್ಸ್‌ಸ್ಪೆಕ್ಟರ್ ಇವರು ಆರೋಪಿತರ ವಿರುದ್ಧ ನ್ಯಾಯಾಲಯದಲ್ಲಿ ದೋಷಾರೋಪಣೆ ಪತ್ರವನ್ನು ಸಲ್ಲಿಸಿರುತ್ತಾರೆ. ಜಪ್ತಾದ ವಾಹನ ಇಲಾಖೆಯ ವಶದಲ್ಲಿದ್ದು ಅದನ್ನು ಮುದ್ದೆಮಾಲು-1 ಎಂದು ಗುರುತಿಸಲಾಗಿದೆ. ವಾಹನದ ಮಾಲಿಕರು ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಲು ಜಪ್ತಾದ ವಾಹನವನ್ನು ಉಪಯೋಗ ಮಾಡಿರುವುದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸದರಿಯವರು ವಿನಂತಿಸಿದ್ದಾರೆ. ವಾಹನ ಮಾಲಿಕರ ಹಾಜರಿಲ್ಲದ್ದರಿಂದ ಹಾಗೂ ಅವರು ವಕೀಲರನ್ನು ನೇಮಿಸಿಲ್ಲದಿರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಪ್ರಾ.ಸಾ-1 ಹಾಗೂ ಪ್ರಾ.ಸಾ-2 ಇವರ ಹೇಳಿಕೆಯ ಮೇರೆಗೆ ದಿನಾಂಕ:25.10.2000 ರಂದು ವಾಹನ ಸಂ. ಸಿಐಎನ್‌ಆರ್-1791 ರಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಆಗಿರುವುದು ಪ್ರಾಧಿಕಾರಕ್ಕೆ ಮನವರಿಕೆ ಆಗಿರುವುದರಿಂದ 1ನೇ ಪ್ರಶ್ನೆಯನ್ನು ಗುಣಾತ್ಮಕವಾಗಿ ತೀರ್ಮಾನಿಸಲಾಗಿದೆ. ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ಸಿದ್ಧಪಡಿಸುವ ಜವಾಬ್ದಾರಿ ವಾಹನ ಮಾಲಿಕರದ್ದು ಇರುತ್ತದೆ. ಆದರೆ ಈ ಗುನ್ಹೆಯಲ್ಲಿ ವಾಹನ ಮಾಲಿಕರಾಗಲೀ ಅಥವಾ ಅವರ ಪರ ವಕೀಲರಾಗಲಿ ಒಮ್ಮೆಯೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುವುದಿಲ್ಲ. ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರೀತ್ಯ ನೀಡಿದ ನೋಟೀಸು ಕರ್ನಾಟಕ ರಾಜ್ಯ ಪತ್ರದ ಮುಖಾಂತರ ಪ್ರಕಟಿಸಿದರೂ ವಾಹನ ಮಾಲಿಕರಾಗಲೀ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡಿದಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿವೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ, ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತಿ ಪಡಿಸಿದ ಮದ್ಯದ ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ 3 ವರ್ಷ ಕಳೆದರೂ ಈವರೆಗೆ ಯಾವುದೇ ವ್ಯಕ್ತಿಯು ಈ ವಾಹನವನ್ನು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಾಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಈ ಕಾರಣದಿಂದ ವಾಹನ ಮಾಲಿಕರು ತನ್ನ ತಿಳುವಳಿಕೆಯಿಂದಲೂ ಸ್ವತಃ ತಾನೇ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾನೆ ಎಂದು ಭಾವಿಸಬೇಕಾಗಿರುತ್ತದೆ. ಹಾಗೂ ಮದ್ಯದ ಅಕ್ರಮ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲ ಅಂಶಗಳನ್ನು ಪರಿಶೀಲಿಸಿ ಹಾಗೂ ಪ್ರಕರಣ ದಾಖಲಾಗಿ 3 ವರ್ಷ ಕಳೆದಿದ್ದರೂ ಯಾವುದೇ ವ್ಯಕ್ತಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರದೇ ಇರುವುದರಿಂದ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ಅದು ಬಿಸಿಲು, ಮಳೆ ಮುಂತಾದ ಹವಾಮಾನ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ:

**ಆದೇಶ**

ಪಿ.ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43(ಸಿ)ರ ಅನ್ವಯ ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಉಪ ವಿಭಾಗ, ಬೆಳಗಾಂವ ರವರ ಮೊಕದ್ದಮೆ ಸಂಖ್ಯೆ:8/2000-01 ದಿನಾಂಕ:25.10.2000ರಲ್ಲಿ ವಶಪಡಿಸಿಕೊಂಡಿರುವ ಮೆಟಡೋರ್ ನಂ. ಸಿಐಎನ್‌ಆರ್-1791ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಅದೇ ರೀತಿಯಾಗಿ ಜಪ್ತಾದ ಮದ್ಯವನ್ನು ಈ ಪ್ರಾಧಿಕಾರದ ಆದೇಶ ಸಂಖ್ಯೆ:ಇಎಕ್ಸ್‌ಇ/ ಇಎಕ್ಸ್‌ಎಸ್/ ಸಿಆರ್‌ಎಂ/ ಡಿಟಿಸಿಆರ್/162/ 2000-01 ದಿನಾಂಕ: 29.11.2000 ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಅದರಂತೆ ಸದರಿ ಮದ್ಯದ ಮಾರಾಟದಿಂದ ಬಂದ ಹಣವನ್ನು ಸರ್ಕಾರಕ್ಕೆ ಭರಣಾ ಮಾಡಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:31.12.2003 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | |
|---|---|---|
| ಪ್ರಾ.ಸಾ. 1 | - ಶ್ರೀ ರಾಮಚಂದ್ರ ವೈಜು ಜಾಧವ | - ಪಂಚ |
| ಪ್ರಾ.ಸಾ. 2 | - ಶ್ರೀ ಗಣೇಶ ಗಂಗಪ್ಪಾ ಉಪರಿ, ನಿವೃತ್ತ ಅಬಕಾರಿ ಸಬ್‌ಇನ್‌ಸ್ಪೆಕ್ಟರ್, ಉಪ ವಿಭಾಗ, ಬೆಳಗಾಂವ | - ಫಿರ್ಯಾದಿ |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ-1 | - ಪಂಚನಾಮೆಯ ಪ್ರತಿ |
| ನಿಶಾನೆ ಪಿ-1(ಎ) | - ಅದರ ಮೇಲಿನ ಪಂಚರ ಸಹಿ. |

| | |
|---|---|
| ನಿಶಾನೆ ಪಿ-1(ಬಿ) | - ಅದರ ಮೇಲಿನ ಫಿರ್ಯಾದಿಯ ಸಹಿ. |
| ನಿಶಾನೆ ಪಿ-2 | - ಫಿರ್ಯಾದಿಯ ಪ್ರತಿ. |
| ನಿಶಾನೆ ಪಿ-2ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-3 | - ಪ್ರಥಮ ವರ್ತಮಾನ ವರದಿಯ ಪ್ರತಿ. |
| ನಿಶಾನೆ ಪಿ-3ಎ | - ಅದರ ಮೇಲಿನ ಫಿರ್ಯಾದಿ ಸಹಿ. |
| ನಿಶಾನೆ ಪಿ-4 | - ಮುದ್ದೆ ಮಾಲನ್ನು ತಾಬಾದಲ್ಲಿ ಇಟ್ಟುಕೊಳ್ಳಲು ಅನುಮತಿ ಪತ್ರ. |
| ನಿಶಾನೆ ಪಿ-4ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-5 | - ರಸಾಯನ ತಜ್ಞರ ವರದಿ. |
| ನಿಶಾನೆ ಪಿ-5ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-6 | - ಆರ್.ಟಿ.ಓ. ರವರ ಪತ್ರ. |
| ನಿಶಾನೆ ಪಿ-6ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-7 | - ರಾಜ್ಯ ಪತ್ರ (ಗೆಝೆಟ್)ದ ಪ್ರತಿ. |
| ನಿಶಾನೆ ಪಿ-8 | - ಅಧಿಕೃತ ಅಧಿಕಾರಿಗಳಿಗೆ ಮುದ್ದೆ ಮಾಲನ್ನು ಮುಟ್ಟುಗೋಲು ಹಾಕಿಕೊಳ್ಳಲು ಬರೆದ ಪತ್ರ. |
| ನಿಶಾನೆ ಪಿ-8ಎ | - ಅದರ ಮೇಲಿನ ಅವರ ಸಹಿ. |
| ನಿಶಾನೆ ಪಿ-9 | - ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲು ನೀಡಿದ ಆದೇಶ. |

**ಅನುಬಂಧ-3**

**ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು:**

1. ಮುದ್ದೆ ಮಾಲು-1 - ಜಪ್ತಾದ ವಾಹನ ಸಂಖ್ಯೆ: ಸಿಎನ್‌ಆರ್-1791 ಮೆಟಡೋರ್.

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು -ಇಲ್ಲಾ

**ಅನುಬಂಧ-5**

ವಾಹನ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು -ಇಲ್ಲಾ

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

ಪಿ.ಆರ್.174

**KARNATAKA ADMINISTRATIVE TRIBUNAL, B.D.A. COMPLEX, INDIRANAGAR BANGALORE**

**NOTIFICATION**

**No.KAT/EST(1)/VAC/2/2004, Bangalore, Dated:30th January, 2004**

It is hereby notified that in addition to sundays, Second Saturdays and General Holidays, notified by the Government of Karnataka for the Calendar Year, 2004, vide No.DPAR 12 HHL 2003, dated:27.11.2003, the Karnataka Administrative Tribunal will remain closed for the Vacations as specified below, during the Calendar Year, 2004:

| | | | |
|---|---|---|---|
| 1. | SUMMER VACATION | : | From Monday, the 19th April, 2004 to Friday, the 30th April, 2004 (bdi). |
| 2. | DASARA VACATION | : | From Thursday, the 14th October, 2004 to Thursday, the 21st October, 2004 (bdi). |
| 3. | WINTER VACATION | : | From Wednesday, the 22nd December, 2004 to Friday, the 31st December, 2004 (bdi). |

As regards the sitting of Vacation Benches, to dispose of urgent matters during Vacations, separate Notifications will be issued at the appropriate time.

BY ORDER OF HON'BLE THE CHAIRMAN,
Registrar,
Karnataka Administrative Tribunal,
Bangalore-38.

PR-175

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:11:2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:**
ಶ್ರೀಮತಿ: ಬಾಳಾಬಾಯಿ ದತ್ತಾತ್ರಯ್ಯಾ ದೋನೆ
ವಾಸ:ಮಂಗಾವಾಡಿ ತಾ: ಸಂಗೋಲಾ ಜಿ:ಸೊಲ್ಲಾಪುರ,
ಹೆಗಡಿಯಾಲ ಗ್ರಾಮ ತಾ:ಜಿಲ್ಲೆ: ಬಿಜಾಪುರ.

**ವಿರುದ್ಧ ಪ್ರತಿವಾದಿಗಳು:**
1. ಶ್ರೀ ಎಂ.ಕೆ. ಮೆಹೆಂತಾಳೆ ಟ್ರಾನ್ಸ್‌ಪೋರ್ಟ್ ಪ್ರೈ.ಲಿ.
ವಾಸ:31:1 ಇರಂದಾವಾನಾ, ಪುಣೆ ಜಿಲ್ಲೆ: ಪುಣೆ-411044.

2. ದಿ-ಡಿವಿಜನಲ್ ಮ್ಯಾನೇಜರ್,
ನ್ಯಾಶನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್,
ನಂ.3, ತೇಜಾ ಹೌಸ್ ಎಂ.ಜಿ. ರೋಡ್, ಪುಣೆ-411001.
(ಬಿಜಾಪುರ ಬ್ರ್ಯಾಂಚ್ ಮುಖಾಂತರ)

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದತ್ತಾತ್ರಯ್ಯಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:12.12.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಬಾಳಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.176

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬ-2 ಕಾನಪ:117:2003, ದಿನಾಂಕ:5ನೇ ಜನವರಿ, 2003**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶ್ರೀಮತಿ ಅಂಬಿಕಾ ಲಖನ್‌ಪವಾರ
ವಾಸ:ಶಿವಾಜಿ ಚೌಕ, ದೇಶಮುಖಗಲ್ಲಿ
ಆಟಪಾಡಿ ತಾ: ಆಟಪಾಡಿ ಜಿಲ್ಲೆ: ಸಾಂಗಲಿ,
(ಮಹಾರಾಷ್ಟ್ರ ರಾಜ್ಯ)

1. ಮಿರ್ ಮಹಾವೀರ ವಾಸು ಹಾವಳಿ,
ವಾಸ:ಸಾವಂತ ಪ್ಲಾಟ್ ನವನಾಥನಗರ, ಸಾಂಗಲಿ, ತಾ:ಜಿಲ್ಲೆ: ಸಾಂಗಲಿ, (ಮಹಾರಾಷ್ಟ್ರ ರಾಜ್ಯ)
2. ದಿ-ಮ್ಯಾನೇಜರ್,
ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎಸ್.ಎಸ್.ಫ್ರಂಟ ರೋಡ್, ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಲಖನ ಯಾದವ ಪವಾರ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:24.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಅಂಬಿಕಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.177

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬ-2 ಕಾನಪ:1:2004, ದಿನಾಂಕ:5ನೇ ಜನವರಿ, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಚೆನ್ನಪ್ಪಾ ತಂದೆ ರಾಮಣ್ಣಾ ವಿಜಾಪುರ
ಹಾಗೂ ಇತರೆ 3 ಜನರು, ವಾಸ:ಕನ್ನೂರು,
ತಾ:ಬಿಜಾಪುರ ಜಿಲ್ಲಾ: ಬಿಜಾಪುರ.

1. ಶ್ರೀ ಸಂಗಪ್ಪಾ ಗುರುಬಸಪ್ಪಾ ಬಗಲ,
ವಾಸ:ಲವಂಗಿ ತಾ:ಎಸ್. ಸೊಲ್ಲಾಪುರ, ಜಿಲ್ಲೆ: ಸೊಲ್ಲಾಪುರ.

2. ನಜೀಮಾ ಕಾಜೀಮಿಯಾ ಖಾಜ,
ವಾಸ:ಚೌಜ, ತಾ:ಎನ್ ಸೊಲ್ಲಾಪುರ, ಜಿಲ್ಲೆ:ಸೊಲ್ಲಾಪುರ
3. ದಿ-ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ ಲಿ. ಗುರುಕುಲ ರೋಡ್,
ಹಮನಶೆಟ್ಟಿ ಬಿಲ್ಡಿಂಗ್ ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕಮಾಲಾಬಾಯಿ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:07.12.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಗಂಡನಾದ ಶ್ರೀ ಚೆನ್ನಪ್ಪಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.178

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:7:2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ರುಕ್ಮೀನಿ ಸಹದೇವ ಪಾಟೀಲ,
ವಾಸ:ಇಟ್ಟೆ, ಬಿಜಾಪುರ.

1. ಕಲ್ಯಾಣ ಡೊಂಗರೆ,
ವಾಸ: ಅಂಜನಗಾಂವ ತಾ:ಮೊಹಲ
ಜಿಲ್ಲೆ: ಸೊಲ್ಲಾಪುರ.
2. ಡಿವಿಜನಲ್ ಮ್ಯಾನೇಜರ್,
ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ, ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಶಿಕಾಂತ ಪಾಟೀಲ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:22.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ರುಕ್ಮೀನಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.179

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:8:2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಅಹುದಾಸಿದಾ ದೋಡಿಬಾ ಪೂಜಾರಿ,
ವಾಸ:ಇಟ್ಟೆ, ಬಿಜಾಪುರ, (ಇತರೆ ಒಬ್ಬರು)

1. ಕಲ್ಯಾಣ ಡೊಂಗರೆ,
ವಾಸ:ಅಂಜನಗಾಂವ, ತಾ:ಮೊಹಲಾ ಜಿಲ್ಲೆ: ಸೊಲ್ಲಾಪುರ.
2. ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ ಗುಲ್ಬರ್ಗಾ ಜಿಲ್ಲೆ: ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮಹಾಸಿದ್ದಾ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:22.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಅಹುದಾಸಿದಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.180

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:9:2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶಾಂತಾಬಾಯಿ ಅರ್ಜುನ ಡೊಂಗರೆ,
ವಾಸ:ಅರೇಗಾಂವ ಬಿಜಾಪುರ,
(ಇತರೆ 3 ಜನರು)

1. ಕಲ್ಯಾಣ ಡೊಂಗರೆ,
   ವಾಸ:ಅಂಜನಗಾಂವ, ತಾ:ಮೊಹಲಾ ಜಿಲ್ಲೆ: ಸೊಲ್ಲಾಪುರ.
2. ಡಿವಿಜನಲ್ ಮ್ಯಾನೇಜರ್,
   ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ, ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅರ್ಜುನ ಡೊಂಗರೆ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:22.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಶಾಂತಾಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.181

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:10:2004, ದಿನಾಂಕ:28ನೇ ಜನವರಿ, 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಅನಂತಾ ದಾದಾ ಕಾಪಾಳೆ
ವಾಸ:ವಾಲವಜ ಜಿಲ್ಲೆ:ಬಿಜಾಪುರ
(ಇತರೆ 2 ಜನರು)

1. ಕಲ್ಯಾಣ ಡೊಂಗರೆ,
   ವಾಸ:ಅಂಜನಗಾಂವ, ತಾ:ಮೊಹಲಾ
   ಜಿಲ್ಲೆ: ಸೊಲ್ಲಾಪುರ.
2. ಡಿವಿಜನಲ್ ಮ್ಯಾನೇಜರ್,
   ನ್ಯೂ ಇಂಡಿಯಾ ಅಸ್ಸೂರೆನ್ಸ್ ಕಂಪನಿ, ಗುಲ್ಬರ್ಗಾ ಜಿಲ್ಲೆ:
   ಗುಲ್ಬರ್ಗಾ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಶಿಕಾಂತಕಾಪಾಳೆ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:22.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಅನಂತಾ ಎಂಬುವರು ನ್ಯಾಯಾಲಯಕ್ಕೆ

ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.182

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:6:2004, ದಿನಾಂಕ:28ನೇ ಜನವರಿ, 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಪ್ರಭಾಕರ ನಾರಾಯಣ ಡೊಂಗರೆ,<br>ಅದೇಗಾಂವ, ಬಿಜಾಪುರ, (ಇತರೆ ಒಬ್ಬರು) | | 1. ಕಲ್ಯಾಣ ಟಿಂಬರಕ,<br>ವಾಸ:ಅಂಜನಗಾಂವ, ತಾ:ಮೊಹಲಾ<br>ಜಿಲ್ಲೆ: ಸೊಲ್ಲಾಪುರ.<br>2. ಡಿವಿಜನಲ್ ಮ್ಯಾನೇಜರ್,<br>ನ್ಯೂ ಇಂಡಿಯಾ ಅಸ್ಯೂರೆನ್ಸ್ ಕಂಪನಿ,<br>ಗುಲ್ಬರ್ಗಾ ಜಿಲ್ಲೆ: ಗುಲ್ಬರ್ಗಾ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸೀತಾರಾಮ ಡೊಂಗರೆ, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:22.02.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ವಾರಸುದಾರರಾದ ಶ್ರೀ ಪ್ರಭಾಕರ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.183

**ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು, ಇವರ ನಡವಳಿಗಳು**

**ವಿಷಯ:** ರಾಷ್ಟ್ರೀಯ ಹೆದ್ದಾರಿ-7ರಲ್ಲಿರುವ ಬಳ್ಳಾರಿ ರಸ್ತೆ (ಒಳ) ತನಿಖಾಠಾಣೆಯನ್ನು ಸ್ಥಳಾಂತರಿಸುವ ಬಗ್ಗೆ ಆದೇಶ.

**ಉಲ್ಲೇಖ:** ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು, ಇವರ ಪತ್ರ ಸಂಖ್ಯೆ:ವಾತೆಜಂಆ /ಜಾ/ ಬರತಠಾ(ಒಳ)/ 167/03-04. ದಿನಾಂಕ:02.12.03.

**ಪ್ರಸ್ತಾವನೆ:**

ಉಲ್ಲೇಖಿತ ಪತ್ರದಲ್ಲಿ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು, ಇವರು ಬಳ್ಳಾರಿ ರಸ್ತೆ (ಒಳ) ತನಿಖಾಠಾಣೆಯ ರಾಷ್ಟ್ರೀಯ ಹೆದ್ದಾರಿ-7ರಲ್ಲಿ ಹಾಲೀ ಕಾರ್ಯನಿರ್ವಹಿಸುತ್ತಿದ್ದು, ಈಗ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ಆರು (6) ರಸ್ತೆಗಳನ್ನು ನಿರ್ಮಿಸುತ್ತಿರುವುದರಿಂದ, ತನಿಖಾಠಾಣೆಯ ಕಾರ್ಯನಿರ್ವಹಣೆಗೆ ತೊಂದರೆಯಾಗುತ್ತಿದೆಯೆಂದು ತಿಳಿಸಿರುತ್ತಾರೆ. ಈ ನಿಟ್ಟಿನಲ್ಲಿ ತನಿಖಾಠಾಣೆಯನ್ನು ತತ್‌ಕ್ಷಣದಿಂದ ಸ್ಥಳಾಂತರಿಸಬೇಕೆಂದೂ ಸಹ ಕೋರಿರುತ್ತಾರೆ. ಈಗಿರುವ ತನಿಖಾಠಾಣೆಯ ಸ್ಥಳದಿಂದ 4 ಕಿ.ಮೀ. ದೂರದಲ್ಲಿ ದೇವನಹಳ್ಳಿಯ ಸರ್ವೆ ನಂ.135/3ರ 1.20 ಎಕರೆ ಭೂಮಿ ವಾಣಿಜ್ಯ ತೆರಿಗೆ ಇಲಾಖೆಯ ಸ್ವಾಧೀನದಲ್ಲಿ ಆ ಸ್ಥಳದಲ್ಲಿ ತನಿಖಾಠಾಣೆಯನ್ನು ಸ್ಥಳಾಂತರಿಸುವುದು ಅನಿವಾರ್ಯವೆಂದು ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು, ಇವರು ಉಲ್ಲೇಖಿತ ತಮ್ಮ ಪತ್ರದಲ್ಲಿ ಕೋರಿರುತ್ತಾರೆ.

ಜಂಟಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು ಹಾಗೂ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿದಾಗ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಬಳ್ಳಾರಿ ರಸ್ತೆ (ಒಳ) ತನಿಖಾಠಾಣೆಯಲ್ಲಿ ಈಗಿರುವ ಸ್ಥಳದಿಂದ 4 ಕಿ.ಮೀ. ಮುಂದೆ ದೇವನಹಳ್ಳಿ ಹತ್ತಿರ ಸ್ಥಳಾಂತರಿಸುವುದು ಸೂಕ್ತವೆನಿಸಿರುವುದರಿಂದ, ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ವಾತೆಅಅ (ಗು ಮತ್ತು ಸ) ವಾತೆಅ-1/ಸಿಆರ್.53/03-04, ದಿನಾಂಕ:31ನೇ ಡಿಸೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಈಗಿರುವ ಬಳ್ಳಾರಿ ರಸ್ತೆ (ಒಳ) ತನಿಖಾಠಾಣೆಯನ್ನು, ರಾಷ್ಟ್ರೀಯ ಹೆದ್ದಾರಿ-7ರಲ್ಲಿ, 4 ಕಿ.ಮೀ. ದೂರದಲ್ಲಿರುವ ದೇವನಹಳ್ಳಿಯ ಇಲಾಖೆಯ ಸ್ವಾಧೀನದಲ್ಲಿರುವ ಸ್ಥಳದ ಸರ್ವೆ ನಂ.135/3ರಲ್ಲಿ ಬಳ್ಳಾರಿ ರಸ್ತೆ (ಒಳ) ತನಿಖಾಠಾಣೆ ಕಾರ್ಯನಿರ್ವಹಿಸುವ ಸ್ಥಳವಾಗಿ ಕ.ಮಾ.ತೆ. ಕಾಯ್ದೆ 1957ರ ಪ್ರಕರಣ 28ಎ. ಉಪ ಪ್ರಕರಣ 1ರ ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಅಶೋಕ್‌ಕುಮಾರ್ ಚ.ಮನೋಲಿ. ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಆದ ನಾನು, ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲು ಆದೇಶ ಹೊರಡಿಸಿರುತ್ತೇನೆ.

ವಾಣಿಜ್ಯ ತೆರಿಗೆಗಳ ಆಯುಕ್ತರು,
ಕರ್ನಾಟಕ, ಬೆಂಗಳೂರು.

ಪಿ.ಆರ್.184

**ಅಬಕಾರಿ ಇಲಾಖೆ**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬಿಜಾಪುರ ಜಿಲ್ಲೆ, ಬಿಜಾಪುರ ಇವರ ನ್ಯಾಯಾಲಯದಲ್ಲಿ**

**ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ:**

1. ಎಚ್.ಪಿ. ಗ್ಯಾಸ್ ಟ್ಯಾಂಕರ್ ನಂಬರ್: ಎಚ್‌ಆರ್-38-ಬಿಜಿ-3390 ಟಾಟಾ ಕಂಪನಿ ವಾಹನದ ಚಾಸಿಸ್ ನಂ:415005-ಬಿ-ಝಡ್.ಝಡ್-205076 ಇಂಜಿನ್ ನಂ.8104012 ಮತ್ತು ಟಾಟಾ ಇಂಡಿಕಾ ಕಾರ್ ನೋಂದಣಿ ನಂ:ಕೆಎ-03-ಝಡ್-705, ಓರಿಜಿನಲ್ ಚಾಯ್ಸ್ ವಿಸ್ಕಿಯ 180 ಎಂ.ಎಲ್. ದ 48 ಬಾಟ್ಲಿಗಳುಳ್ಳ 465 ರಟ್ಟಿನ ಪೆಟ್ಟಿಗೆಗಳು ಓಲ್ಡ್ ಮಂಕ್ XXX ಎಕ್ಸ್ ರಂನ 180 ಎಂ.ಎಲ್. ದ 48 ಬಾಟ್ಲಿಗಳುಳ್ಳ 410 ರಟ್ಟಿನ ಪೆಟ್ಟಿಗೆಗಳು 7560.000 ಲೀಟರ್ ಮದ್ಯ ಜಪ್ತಿ ಮಾಡಿ ಅಬಕಾರಿ ಉಪ ನಿರೀಕ್ಷಕರು, ಬಿಜಾಪುರ ಉಪವಿಭಾಗ ಇವರ ಗುನ್ಹೆ ನಂ.33/2003-04, ದಿನಾಂಕ:02.01.2004.

ಮೇಲ್ಕಂಡ ಪ್ರಕರಣಗಳಲ್ಲಿ ಅನಧಿಕೃತವಾಗಿ ದೇಶಿಯವಾದ ವಿದೇಶಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಮೊಕದ್ದಮೆಗಳಲ್ಲಿ ಮೇಲೆ ತಿಳಿಸಿದ ವಾಹನಗಳನ್ನು ಜಪ್ತು ಮಾಡಿದ್ದು ಮೇಲೆ ತೋರಿಸಿದ ವಾಹನಗಳ ಮಾಲೀಕರು ಜಪ್ತು ಮಾಡಿದ ದೇಶಿಯವಾದ ವಿದೇಶಿ ಮದ್ಯ ಮತ್ತು ಜಪ್ತು ಮಾಡಿದ ವಾಹನಗಳ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ರಾಜ್ಯ ಸರ್ಕಾರದ ಪತ್ರಾಂಕಿತ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು.

ಹಾಗೊಂದು ವೇಳೆ ನಿಗದಿತ ಅವಧಿಯೊಳಗೆ ಯಾರೇ ಆಗಲಿ ಮುಂದೆ ಬಂದು ತಮ್ಮ ಹಕ್ಕನ್ನು ಜಪ್ತು ಮಾಡಿದ ಮುದ್ದೇಮಾಲು ಮತ್ತು ವಾಹನದ ಮೇಲೆ ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಮತ್ತು 43(ಸಿ)ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಸದರಿ ಪ್ರಕಟಣೆಯನ್ನು ದಿನಾಂಕ:04.02.2004ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

**ಕೆ.ಆರ್. ಗೋವಿಂದಶೆಟ್ಟಿ**
ಪ್ರಾಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.185

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ.ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/77/2002.03 ದಿನಾಂಕ:31ನೇ ಜನವರಿ, 2004**

**ಉಪಸ್ಥಿತರು:** ಶ್ರೀ ಎಸ್.ಎಸ್. ವಡಕಣ್ಣವರ
ಪ್ರಭಾರ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡಜಿಲ್ಲೆ, ಕಾರವಾರ.

**ಫಿರ್ಯಾದಿ:** ವಿರುದ್ಧ **ಆರೋಪಿಗಳು:**

ವೆಲೆಂಟೈನ್ ಫ್ರಾನ್ಸಿಸ್ ಡಿಸೋಜಾ
ಪಿ.ಎಸ್.ಐ. ಕಾ.ಸು.-1
ಭಟ್ಕಳ ಶಹರ ಪೊಲೀಸ್ ಠಾಣೆ.

1) ಜೋಸಫ್ ತಂದೆ ಥಾಮಸ್
ಸಾ:ಕೊಂಬುನೇಲ್ ಹೌಸ್
ಕಿಳಿಯಂದರ ಪೋಸ್ಟ್ ಕೂಟಪೊಳಿ, ಕಣ್ಣೂರ ಜಿಲ್ಲೆ, ಕೇರಳ.

2) ಜೊನ್ಸನ್ ಯಾನೆ ಸುನೀಶ ತಂದೆ ಆಗೋಸ್ತೀನ್
ಸಾ: ಪಾಲಕ್ಕೆಲ್ ಹೌಸ್, ಕೊಂಡಿ ಪೋಸ್ಟ್,
ಕಳಿಪರಂಬಾ ತಾಲ್ಲೂಕು ಕಣ್ಣೂರ ಕೇರಳ.

**ತೀರ್ಪು**

ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32(1)ರಂತೆ ಹೊರಿಸಲಾಗಿದ್ದು, ಜಪ್ತಿಯಾದ ಮದ್ಯದ ಪೆಟ್ಟಿಗೆಗಳು ಮತ್ತು ವಾಹನವನ್ನು ಕಲಂ 43ಎ (2) ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

1. ದಿನಾಂಕ:16.10.2002ರಂದು ಈ ಪ್ರಕರಣದ ಫಿರ್ಯಾದುದಾರರಿಗೆ ಬಂದಂತಹ ಖಚಿತವಾದ ವರ್ತಮಾನದ ಮೇರೆಗೆ ತನ್ನ ಸಿಬ್ಬಂದಿಗಳು ಹಾಗೂ ಇಬ್ಬರು ಪಂಚರನ್ನು ಜೊತೆಯಲ್ಲಿ ಕರೆದುಕೊಂಡು ಪೊಲೀಸ್ ಠಾಣೆಯಿಂದ ಹೊರಟು ಭಟ್ಕಳ ಶಹರದ ನ್ಯೂ ಇಂಗ್ಲೀಷ್ ಸ್ಕೂಲ್ ಎದುರಿನ ಬಂದರು ರಸ್ತೆಯ ಬದಿಯಲ್ಲಿ ಅವಿತು ಕಾಯುತ್ತಿದ್ದಾಗ ಸುಮಾರು 21:30 ಗಂಟೆಯ ಸಮಯಕ್ಕೆ ಭಟ್ಕಳದ ಶಮುಸುದ್ದೀನ್ ಸರ್ಕಲ್ ಕಡೆಯಿಂದ ಬಂದರು ಕಡೆಗೆ ಹೋಗಲು ಬಂದಂತಹ ಲಾರಿ ಸಂಖ್ಯೆ:ಸಿಎಎ-3337 ನೇದನ್ನು ನಿಲ್ಲಿಸಲು ಕೈಸನ್ನೆ ಮಾಡಿದಾಗ ಸದ್ರಿ ಲಾರಿಯ ಚಾಲಕನು ಸ್ವಲ್ಪ ಮುಂದೆ ಹೋಗಿ ಲಾರಿ ನಿಲ್ಲಿಸಿದಾಗ, ಲಾರಿಯಲ್ಲಿ ಏನಿದೆ ಎಂದು ಕೇಳಲು ಕಿರಾಣಿ ಸಾಮಾನುಗಳು ಇರುವದಾಗಿ ತಿಳಿಸಿದಾಗ, ಸಂಶಯದಿಂದ ಲಾರಿಯ ತಾಡಪತ್ರಿಯನ್ನು ಬಿಚ್ಚಿ ಒಳಗಡೆ ನೋಡಿದಾಗ ಈ ಕೆಳಕಾಣಿಸಿದ ಮದ್ಯದ ಪೆಟ್ಟಿಗೆಗಳು ಕಂಡು ಬಂದಿದ್ದಾಗಿ ತಿಳಿಸಿರುತ್ತಾರೆ.

1. ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ 180 ಮಿ.ಲೀ.ನ. 48 ರಂತೆ ಇರುವ 208 ಪೆಟ್ಟಿಗೆಗಳು
2. ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ 375 ಮಿ.ಲೀ.ನ. 24 ರಂತೆ ಇರುವ 40 ಪೆಟ್ಟಿಗೆಗಳು
3. ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ 750 ಮಿ.ಲೀ.ನ. 12 ರಂತೆ ಇರುವ 50 ಪೆಟ್ಟಿಗೆಗಳು

2. ಸದ್ರಿ ವಾಹನ ಚಾಲಕನಿಗೆ ಮೇಲ್ಕಾಣಿಸಿದ ಮದ್ಯದ ಪೆಟ್ಟಿಗೆಗಳನ್ನು ಸಾಗಿಸಲು ಪಾಸ್ ಅಥವಾ ಪರ್ಮಿಟ್ ಇದೆಯೇ ಎಂದು ಕೇಳಲಾಗಿ, ಸದ್ರಿಯವನು ಇಲ್ಲವೆಂದು ತಿಳಿಸಿದಾಗ ಮತ್ತು ಇದನ್ನು ಎಲ್ಲಿಂದ ಎಲ್ಲಿಗೆ ಒಯ್ಯುತ್ತಿರುವಿರಿ? ಎಂದು ಕೇಳಲಾಗಿ ಸಮರ್ಪಕವಾದ ಉತ್ತರವನ್ನು ಆತನು ನೀಡದಿದ್ದುದರಿಂದ ಸದ್ರಿ ಮದ್ಯದ ಪೆಟ್ಟಿಗೆಗಳು ಮತ್ತು ಲಾರಿಯನ್ನು ಪಂಚನಾಮೆ ಮೂಲಕ ಜಪ್ತು ಮಾಡಿ ಮುಂದಿನ ಕ್ರಮಕೈಗೊಂಡು ಲಾರಿಯ ಚಾಲಕ ಮತ್ತು ಕ್ಲೀನರನು ಅನಧಿಕೃತವಾಗಿ ಮದ್ಯದ ಪೆಟ್ಟಿಗೆಗಳನ್ನು ಲಾರಿಯಲ್ಲಿ ಸಾಗಿಸುತ್ತಿದ್ದಾಗ ಸಿಕ್ಕಿ ಬಿದ್ದ ಕಾರಣ ಸದ್ರಿಯವರ ವಿರುದ್ಧ ಠಾಣೆಗೆ ಬಂದು ತನ್ನ ಫಿರ್ಯಾದನ್ನು ಕಲಂ 34 ರಂತೆ ದಾಖಲಿಸಿದ ಪ್ರಕಾರ ಭಟ್ಕಳ ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ:92/2002 ದಿನಾಂಕ:17.10.2002ರಂತೆ ಗುನ್ನೆಯನ್ನು ದಾಖಲಿಸಿ ಗುನ್ನೆಗೆ ಸಂಬಂಧಿಸಿದ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

3. ಫಿರ್ಯಾದುದಾರರು ಸಲ್ಲಿಸಿದ ದಾಖಲೆಗಳ ಆಧಾರದ ಮೇರೆಗೆ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಈ ಪ್ರಕರಣದ ಇಬ್ಬರು ಆರೋಪಿಗಳಿಗೆ ಕಾರಣ ಕೇಳಿ ನೋಟೀಸನ್ನು ತನಿಖಾಧಿಕಾರಿಯಿಂದ ಜಾರಿ ಮಾಡಿಸಲಾಗಿ, ಸದ್ರಿ ನೋಟಿಸನ್ನು ಇಬ್ಬರೂ ಆರೋಪಿಗಳು ದಿನಾಂಕ:31.02.2003 ರಂದು ಸ್ವೀಕರಿಸಿದ್ದು ಇವರಿಬ್ಬರೂ ಈ ಪ್ರಾಧಿಕಾರದಲ್ಲಿ ಇಂದಿನವರೆಗೂ ನೋಟಿಸಿಗೆ ತನ್ನ ಸಮಜಾಯಿಷಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಅವರು ನೀಡಿದಂತಹ ವಿಳಾಸಕ್ಕೆ ನೋಂದಾಯಿತ ಮೂಲಕ ಕಾರಣ ಕೇಳಿ ನೋಟಿಸನ್ನು ಇನ್ನೊಮ್ಮೆ ಕಳುಹಿಸಲಾಗಿ ಜಾನ್ಸನ್ ಇವರ ವಿಳಾಸಕ್ಕೆ ಕಳುಹಿಸಿದ ನೋಟಿಸು ಅವರು ಯಾರೆಂಬುದರ ಬಗ್ಗೆ ತಿಳಿದು ಬರುವುದಿಲ್ಲವಾಗಿ ಅಂಚೆ ಲಕೋಟೆಯು ಮರಳಿ ಬಂದಿರುತ್ತದೆ. ಅದೇ ರೀತಿ ಜೋಸೆಫ್ ಇವರ ವಿಳಾಸಕ್ಕೆ ಕಳುಹಿಸಿದ ನೋಟಿಸು ಸಹ ಅವರು ಯಾರೆಂದು ತಿಳಿದು ಬಾರದ ಕಾರಣಕ್ಕಾಗಿ ಅಂಚೆ ಲಕೋಟೆಯು ಮರಳಿ ಬಂದಿರುತ್ತದೆ.

4. ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು ಹೊನ್ನಾವರ ವಲಯ ಇವರು ದಿನಾಂಕ:17.02.2003ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವ ವರದಿಯ ಲಗ್ತ ಇಟ್ಟಿರುವ ವಾಹನದ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟನ್ನು ಪರಿಶೀಲಿಸಲಾಗಿ ಸದರಿ ವಾಹನದ ಮಾಲೀಕರು ಕಾಂತರಾಜ ತಂದೆ ಕುಪ್ಪುಸ್ವಾಮಿ ನಂ.496 4ನೇ ಮೈನ್, ಕಮಲಾನಗರ, ಬೆಂಗಳೂರು-560 079 ಇವರದಾಗಿರುವುದಾಗಿ ತಿಳಿದು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿಯವರಿಗೂ ಸಹ ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಾರಣ ಕೇಳಿ ನೋಟೀಸನ್ನು ಕಳುಹಿಸಲಾಗಿ ಇಂತಹ ಹೆಸರಿನವರು ಈ ವಿಳಾಸದಲ್ಲಿ ಇರುವುದಿಲ್ಲವಾಗಿ ಅಂಚೆ ಲಕೋಟೆಯಲ್ಲಿ ನಮೂದಿಸಿ ಮರಳಿ ಬಂದಿರುತ್ತದೆ. ಆದುದರಿಂದ ಸದರಿಯವರು ನೀಡಿರುವ ವಿಳಾಸವು ತಪ್ಪು ಅಥವಾ ಸುಳ್ಳು ಎಂದು ಸಹ ಕಂಡು ಬರುತ್ತದೆ.

5. ಈ ನಡುವೆ ಆರೋಪಿಗಳು ಕಾರಣ ಕೇಳಿ ನೋಟಿಸಿಗೆ ಸಮಜಾಯಿಷಿ ಸಲ್ಲಿಸದೇ ಇದ್ದುದನ್ನು ಪರಿಗಣಿಸಿ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಮದ್ಯದ ಪೆಟ್ಟಿಗೆಗಳನ್ನು ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/77/2002-03 ದಿನಾಂಕ:18.03.2003 ರಂತೆ ಕಲಂ 43ಸಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗಿರುತ್ತದೆ.

6. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು ಹೊನ್ನಾವರ ವಲಯ ಇವರು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಪ್ರಾಧಿಕಾರಕ್ಕೆ ಪತ್ರ ಸಂಖ್ಯೆ: ಅಬಕಾರಿ/ಸಿಆರ್‌ಎಂ/51/2002-03 ದಿನಾಂಕ:19.01.2004 ರಂತೆ ಸಲ್ಲಿಸಿದ್ದು, ಸದರಿ ವರದಿಯಲ್ಲಿ ಮಾದರಿ ಸೀಸೆಗಾಗಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿರುವುದಾಗಿ ಮತ್ತು ಅದು $25^0$ ಡಿಗ್ರಿ ಸೆಂಟಿಗ್ರೇಡ್‌ಗಳಲ್ಲಿ ಶೇ 42% ವಿ/ವಿ ಯಷ್ಟು ಇರುವುದಾಗಿ ತಜ್ಞರು ಅಭಿಪ್ರಾಯ ಪಟ್ಟಿರುತ್ತಾರೆ.

7. ಈ ಪ್ರಕರಣ ದಾಖಲಾಗಿ ಈಗಾಗಲೇ ಒಂದು ವರ್ಷ ಮೂರು ತಿಂಗಳುಗಳು ಕಳೆದರೂ ಸಹ ಜಪ್ತಿಯಾದಂತಹ ವಾಹನವು ತನ್ನದೆಂದು ಕೋರಿಕೊಂಡು ರುಜುವಾತನ್ನು ಹಾಜರುಪಡಿಸಿ ಜಪ್ತಿಯಾದ ಮದ್ಯದ ಪೆಟ್ಟಿಗೆಗಳು ಕಾನೂನು ಬದ್ಧವಾಗಿ ಸಾಗಿಸಲ್ಪಡುತ್ತಿದ್ದವೆಂದೂ ಮತ್ತು ಒಂದು ವೇಳೆ ಅವು ಅಕ್ರಮ ಮದ್ಯದ ಪೆಟ್ಟಿಗೆಗಳಾಗಿದ್ದು ಅವುಗಳ ಸಾಗಾಣಿಕೆಯ ಬಗ್ಗೆ ತಮ್ಮ ಗಮನಕ್ಕೆ ಬಾರದೇ ಮತ್ತು ತಾವು ಶಾಮೀಲಾಗದೇ ಮತ್ತು ತಮಗೆಲ್ಲರಿಗೂ ಅರಿವಿಲ್ಲದಂತೆ ಈ ಅಕ್ರಮ ಮದ್ಯದ ಸಾಗಾಣಿಕೆಯು ನಡೆದಿದೆ ಎಂಬುದರ

ಬಗ್ಗೆ ಆರೋಪಿಗಳಾಗಲೀ ಅಥವಾ ವಾಹನದ ಮಾಲೀಕರಾಗಲೀ ಅವರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸಿ, ತೃಪ್ತಿಕರವಾಗಿ ನಿರೂಪಿಸಿರುವುದಿಲ್ಲ. ಅಲ್ಲದೇ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಮತ್ತು ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಅಂಶವು ಪತ್ತೆಯಾಗಿರುವುದರಿಂದ ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಗಳ ಆಧಾರದ ಮೇಲೆ ಆರೋಪಿಯು ಅಕ್ರಮವಾಗಿ ಈ ಪ್ರಕರಣದ ವಾಹನದಲ್ಲಿ ಮದ್ಯದ ಪೆಟ್ಟಿಗೆಗಳು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಅಲ್ಲದೇ ಸದರಿ ಅಕ್ರಮ ಮದ್ಯಸಾರದ ಸಾಗಾಟವು ಪ್ರಕರಣ ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಂದುಕೊಂಡೇ ಮತ್ತು ಅವರೆಲ್ಲರೂ ಶಾಮೀಲಾಗಿಯೇ ಮತ್ತು ಅವರಿಗೆ ಅರಿವಿದ್ದುಕೊಂಡೇ ಈ ಅಕ್ರಮ ಮದ್ಯದ ಪೆಟ್ಟಿಗೆಗಳ ಸಾಗಾಟವಾಗಿರುವುದು ರುಜುವಾತಾಗಿರುವುದರಿಂದ ಹಾಗೂ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ (1)ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಭಟ್ಕಳ ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ:92/2002 ದಿನಾಂಕ:17.10.2002ರಲ್ಲಿ ಜಪ್ತಿಯಾದಂತಹ ಲಾರಿ ಸಂಖ್ಯೆ:ಸಿಎಎ-3337 ನೇದನ್ನು ಕಲಂ 43ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಜನವರಿ ತಿಂಗಳ 31ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎಸ್.ಎಸ್. ವಡಕಣ್ಣವರ**
ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡಜಿಲ್ಲೆ, ಕಾರವಾರ
(ಪ್ರಭಾರ).

ಪಿ.ಆರ್.186

**IN THE COURT OF COMMISSIONER FOR WORKMEN'S COMPENSATION, BIDAR**

**PROCLAMATION**

**No. LOB/WCA/Cr-11/2004**

| Applicants: | V/s | Respondents: |
|---|---|---|
| 1. Jagdevi W/o Late Arjun<br>Ag:32yrs. Occ: Household<br>R/o Kamkhana Dist: BIDAR<br>& 6 others. | | 1. Ghal reddy S/o Gundareddy<br>Age:Major Occ:Agriculturist<br>R/o Village Hosahalli<br>NyalkatMand Zaheerabad, Dist:Medak |

Smt JAGDEVI W/o ARJUN R/o Village Kamkhana Dist: BIDAR have filed application in this court claiming compensation stating that late Arjun was working as Labour Under the Respondent No. 1 he met with an accident arising out of and during the course of employment as a result he died on:04.05.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-187

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ:ಕಾಅಬಿ-2 ಕಾನಪ:12:2004, ದಿನಾಂಕ:28ನೇ ಜನವರಿ, 2004**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| ಶ್ರೀಮತಿ ರೇಣುಕಾ ಪ್ರೇಮಸಿಂಗ್ ರಾಠೋಡ್<br>ಸಾ-ಸಿದ್ದಾಪುರ ತಾಲ್ಲೂಕು:ಜಿಲ್ಲೆ: ಬಿಜಾಪುರ | 1. ಶಿವು ಕೇಸು ಚವ್ವಾಣ,<br>ಸಾ-ಸಿದ್ದಾಪುರ ತಾ:ಜಿ:ಬಿಜಾಪುರ.<br>2. ದಿ-ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ,<br>ಎಸ್ಎನ್ ಪ್ರಂಟ ರೋಡ್, ಬಿಜಾಪುರ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಪ್ರೇಮಸಿಂಗ್, ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:17.11.1997 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ರೇಣುಕಾ, ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು
ಉಪ ವಿಭಾಗ-2 ಬಿಜಾಪುರ ಜಿಲ್ಲೆ,
ಬಿಜಾಪುರ.

ಪಿ.ಆರ್.188

## ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ರವರ ನ್ಯಾಯಾಲಯ

**ಸಂಖ್ಯೆ:ಇಎಕ್ಸ್‌ಇ:3:ಸಿಆರ್‌ಎಂ:27:2000-01, ದಿನಾಂಕ:3ನೇ ಜನವರಿ, 2004**

**ಉಪಸ್ಥಿತರು:** ಶ್ರೀ ಎಂ.ಕೆ. ಕುಟ್ಟಪ್ಪ
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ
ಕಮೀಷನರ್ ಆಫ್‌ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು | | ಎ.ಎ. ಫಿಲಿಪ್ಸ್ |
| ಗೋಣಿಕೊಪ್ಪ ಪೊಲೀಸ್‌ಠಾಣೆ | | ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:** ದಿನಾಂಕ:19.08.2000ರಂದು ಗೋಣಿಕೊಪ್ಪ ಪೊಲೀಸ್‌ಉಪ ನಿರೀಕ್ಷಕರು ಕರ್ತವ್ಯದಲ್ಲಿದ್ದಾಗ ದೊರೆತ ಖಚಿತ ವರ್ತಮಾನದ ಮೇರೆಗೆ 18.08.2000ರಂದು ರಾತ್ರಿ ವೇಳೆಯಲ್ಲಿ ಮೈಸೂರು ಕಡೆಯಿಂದ ವೀರಾಜಪೇಟೆ ಕಡೆಗೆ ಲಾರಿ ನಂ.ಟಿಎನ್‌ಎಸ್. 8917 ಬರುತ್ತಿದ್ದು, ಸದರಿ ಲಾರಿಯನ್ನು ನಿಲ್ಲಿಸುವಂತೆ ಚಾಲಕನಿಗೆ ಸೂಚನೆ ನೀಡಿ ಲಾರಿ ನಿಂತ ತಕ್ಷಣ ಲಾರಿಯ ಚಾಲಕ ಮತ್ತು ಲಾರಿಯ ಕ್ಯಾಬಿನ್‌ನಲ್ಲಿದ್ದ 2 ಜನರನ್ನು ಹಿಡಿದುಕೊಂಡು ವಿಳಾಸ ಕೇಳಿದಾಗ ಲಾರಿ ಚಾಲನೆ ಮಾಡುತ್ತಿದ್ದವನ ಹೆಸರು ಕಂದಸ್ವಾಮಿ, ತಂದೆ ನಲ್ಲಪ್ಪ ಗೌಂಡರ್, ಕೊಯಮ್ಮತ್ತೂರು ತಮಿಳುನಾಡು ಮತ್ತು ಎ.ಎ. ಫಿಲಿಪ್ಸ್, ತಂದೆ ಆಲ್ವಿನ್ ಕ್ಷೇವಿಯರ್ ಬೈತೂರು ಗ್ರಾಮ ಪಾಲೇಕಾಡು, ಕೇರಳರಾಜ್ಯ ಎಂದು ತಿಳಿಸಿದ್ದು, ಇವರುಗಳನ್ನು ಲಾರಿಯಲ್ಲಿ ಏನಿದೆ ಎಂದು ಕೇಳಿದಾಗ ಸ್ಪಿರೀಟ್ ತುಂಬಿರುವ ಪ್ಲಾಸ್ಟಿಕ್ ಕ್ಯಾನುಗಳಿರುವುದೆಂದು ತಿಳಿಸಿರುತ್ತಾರೆ. ಈ ಸ್ಪಿರೀಟನ್ನು ಸಾಗಾಟ ಮತ್ತು ಮಾರಾಟ ಮಾಡಲು ಸರ್ಕಾರದ ಯಾವುದಾದರು ಪರವಾನಗಿ ಇದೆಯೇ ಎಂದು ಕೇಳಿದಾಗ ಯಾವುದೇ ಪರವಾನಗಿ ಇಲ್ಲವೆಂದು ತಿಳಿಸಿದ್ದರಿಂದ ಸದರಿ ಲಾರಿಯಲ್ಲಿದ್ದ ಸ್ಪಿರೀಟ್ ತುಂಬಿಸಿ ಲೋಡ್ ಮಾಡಿದ್ದ ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಸ್ಥಳದಲ್ಲೇ ಹಾಜರಿದ್ದ ಪಂಚಾಯಿತಿದಾರರ ಸಮಕ್ಷಮ ನೋಡಲಾಗಿ 40ಲೀ. ಹಿಡಿಯುವಂತಹ ಒಟ್ಟು 181 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಿದ್ದು ಪ್ರತಿಯೊಂದರಲ್ಲೂ ಅಂದಾಜು 750ಮಿ.ಲೀ. ಬಾಟಲಿ ಹಿಡಿಯುವಷ್ಟು ಸ್ಪಿರೀಟ್‌ನ್ನು ಶ್ಯಾಂಪಲ್ ತೆಗೆದು ಶೀಲು ಮಾಡಲಾಗಿದ್ದು ಸದರಿ ಸ್ಥಳದ ಪಂಚಾಯಿತಿದಾರರ ಸಮಕ್ಷಮ ಮಹಜರು ತಯಾರಿಸಿ ವಾಹನವನ್ನು ಮಾಲು ಸಮೇತ ವಶಪಡಿಸಿಕೊಂಡು ಮೊಕದ್ದಮೆ ಸಂ:99:2000 ದಿನಾಂಕ:19.08.2000ರಂತೆ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಮಾಲನ್ನು ಅಬಕಾರಿ ಉಪ ನಿರೀಕ್ಷಕರು ಪೊನ್ನಂಪೇಟೆ ಉಪ ವಲಯ ರವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಮೊಕದ್ದಮೆಯ ಬಗ್ಗೆ ವಾರಸುದಾರರನ್ನು ತಿಳಿಯಲು ತಮಿಳುನಾಡು ರಾಜ್ಯದ ಚೆನ್ನೈನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಆದುದರಿಂದ ವಾಹನದ ಮಾಲಿಕರು ಯಾರೆಂದು ಪತ್ತೆಯಾಗಿರುವುದಿಲ್ಲ.

ಶ್ರೀ ಮುರುಗೇಶನ್ ಎಂಬುವರು ದಿನಾಂಕ:15.09.2000ರಂದು ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿಕೊಂಡಿರುತ್ತಾರೆ.

ಸದರಿ ಮೊಕದ್ದಮೆಯ ಬಗ್ಗೆ ಸರ್ಕಾರದ ಪರ ವಕೀಲರನ್ನು ನೇಮಿಸಿ ಈ ಪ್ರಾಧಿಕಾರದಲ್ಲಿ ವಿಚಾರಣೆ ನಡೆಸಿ ನಂತರ ಇದರ ಬಗ್ಗೆ ಕ್ರಮ ಜರುಗಿಸಲಾಗುವುದಾಗಿ ಸಮನ್ಸ್ ನೀಡಲಾಗಿತ್ತು. ಕಳುಹಿಸಿದಂತೆ ಸಮನ್ಸ್‌ಗಳು ನೋಂದಣಿ ಅಂಚೆಯ ಮೂಲಕ ಅರ್ಜಿಯನ್ನು ಸಲ್ಲಿಸಿದ್ದ ವಿಳಾಸದವರಿಗೆ ಕಳುಹಿಸಿದರೂ ಅಂಚೆ ಮರಳಿ ಬಂದಿರುತ್ತದೆ. ಹಾಗೂ ಪ್ರ.ವ. ವರದಿಯಲ್ಲಿ ಅಪರಾಧಿಗಳೆಂದು ದಾಖಲಾದವರ ಹೆಸರಿಗೆ ನೋಟೀಸ್ ಕಳುಹಿಸಲಾಗಿದ್ದು ಅವರ ಹೆಸರಿಗೆ ಕಳುಹಿಸಿದಂತಹ ನೋಟೀಸ್ ಸಹ ವಾಪಾಸಾಗಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ

ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ, ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತಿ ಪಡಿಸಿದ ಅಕ್ರಮ ಸ್ಪಿರೀಟ್ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣ ದಾಖಲಾಗಿ 3 ವರ್ಷ ಕಳೆದರೂ ಅರ್ಜಿ ಸಲ್ಲಿಸಿದಂತಹ ವ್ಯಕ್ತಿಯಾದ ಮುರುಗೇಶನ್ ರವರಾಗಲಿ ಅಥವಾ ವಾಹನದ ಮಾಲೀಕರಾಗಲಿ ಈ ಪ್ರಾಧಿಕಾರಕ್ಕೆ ಹಾಜರಾಗಲಿಲ್ಲ. ಮತ್ತು ಅರ್ಜಿದಾರರಿಗೆ ಈ ಪ್ರಕರಣದ ಬಗ್ಗೆ ಪ್ರಾಧಿಕಾರದಲ್ಲಿ ನ್ಯಾಯಾಲಯಕ್ಕೆ ಹಾಜರಾಗುವಂತೆ ನೋಟೀಸ್ ಕಳುಹಿಸಿದರೂ ನೋಂದಣಿ ಅಂಚೆ ವಾಪಸ್ಸು ಬರುವುದರಿಂದ ಇದನ್ನು ನೋಡಿದಾಗ ಇವರು ಸುಳ್ಳಾಗಿ ಅರ್ಜಿ ಸಲ್ಲಿಸಿದ್ದು ವಾಹನವು ಇವರಿಗೆ ಸಂಬಂಧಪಟ್ಟದ್ದಾಗಿರದೆ ವಾಹನ ಮಾಲೀಕರೇ ಸ್ವತಃ ಈ ಅಕ್ರಮ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಾದ ಸ್ಥಳ ಮಹಜರು, ಪ್ರಥಮ ಮಾಹಿತಿ ವರದಿ, ರಾಸಾಯನಿಕ ತಜ್ಞರ ವರದಿ ಮುಂತಾದವುಗಳನ್ನು ಪರಿಶೀಲನೆ ಮಾಡಿದಲ್ಲಿ 19.08.2000ರಂದು ವಾಹನದಲ್ಲಿ ಆರೋಪಿಯು ಅಕ್ರಮವಾಗಿ 6335.000 ಲೀಟರ್ ಅಕ್ರಮ ಸ್ಪಿರೀಟ್‌ನ್ನು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲಿಕರೆ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಜಾಗದಲ್ಲಿಟ್ಟು ಅದು ಬಿಸಿಲು, ಮಳೆ ಮುಂತಾದ ಹವಾಮಾನ ವೈಪರೀತ್ಯಗಳಿಗೆ ದಿನೇದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ.

**ಆದೇಶ**

ಎಂ.ಕೆ. ಕುಟ್ಟಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಸಿ)ರ ಅನ್ವಯ ಆರಕ್ಷಕ ಉಪ ನಿರೀಕ್ಷಕರು ಗೋಣಿಕೊಪ್ಪ ಠಾಣೆ ಇವರ ಮೊ.ಸಂ:99:2000 ದಿನಾಂಕ:19.08.2000ರಲ್ಲಿ ವಶಪಡಿಸಿಕೊಂಡಿರುವ ಲಾರಿ ನಂ. ಟಿಎನ್‌ಎಸ್.8917 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರ್‌ನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.189

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್‌ಎಕ್ಸೈಜ್, ಬೆಳಗಾಂವ ಜಿಲ್ಲೆ, ರವರ ನ್ಯಾಯಾಲಯದಲ್ಲಿ**

**ಆದೇಶ ಸಂಖ್ಯೆ:ಇಎಕ್ಸ್‌ಇ/ಸಿಆರ್‌ಎಂ/ಡಿಟಿಸಿಆರ್/498/2001-02, ದಿನಾಂಕ:31ನೇ ಡಿಸೆಂಬರ್, 2003**

**ಪ್ರಕರಣ ಸಂಖ್ಯೆ:**ಅಬಕಾರಿ ಸಬ್ ಇನ್‌ಸ್ಪೆಕ್ಟರ್ ನಂ-1, ಇ.ಐ.ಬಿ., ಬೆಳಗಾಂವ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ:20/2001-02, ದಿನಾಂಕ:11.04.2002

**ಉಪಸ್ಥಿತರು:** ಶ್ರೀ ಪಿ.ಎನ್. ಮುರಗೋಡ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್‌ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಶ್ರೀ ಹೆಚ್.ಎಂ. ನಾಯಕ<br>ಅಬಕಾರಿ ಸಬ್ ಇನ್‌ಸ್ಪೆಕ್ಟರ್<br>ಇ.ಐ.ಬಿ., ಬೆಳಗಾಂವ. | | 1) ಶ್ರೀಮತಿ ಶಕುಂತಲಾ ಶ್ರೀಪಾದ ಸುರ್ವೆ,<br>ಅನ್ನೂರಕರ ಗಲ್ಲಿ, ಬೆಳಗಾಂವ,<br>ವಾಹನ ಮಾಲಿಕರು.<br>2) ನಿತಿನ ಲಕ್ಷ್ಮಣ ಪಾಟೀಲ, ಮ.ನಂ.ಜೆ-323<br>ಇಂಡಾಲ ಕಾಲನಿ, ಬೆಳಗಾಂವ (ಆರೋಪಿ). |

**ಪ್ರಸ್ತಾವನೆ:**

ದಿನಾಂಕ:11.04.2002ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಹೆಚ್.ಎಂ. ನಾಯಕ, ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಇ.ಐ.ಬಿ., ಬೆಳಗಾಂವ ಇವರು ಅಬಕಾರಿ ಉಪ ಅಧೀಕ್ಷಕರು, ಇಐಬಿ, ಬೆಳಗಾಂವ ಹಾಗೂ ಸಿಬ್ಬಂದಿ ಮತ್ತು ಇಬ್ಬರು ಪಂಚರೊಂದಿಗೆ ಬೆಳಗಾಂವಿಯ ನೆಹರು ಕ್ರೀಡಾಂಗಣದ ಎಡಬದಿಯಲ್ಲಿ ರಸ್ತೆ ಕಾವಲು ಮಾಡುತ್ತಿದ್ದಾಗ ಸಾಯಂಕಾಲ 3:30 ರ ಸಮಯದಲ್ಲಿ ಒಂದು ಕೆಂಪು ಬಣ್ಣದ ದ್ವಿಚಕ್ರ ವಾಹನ (ಬಜಾಜ್ ಪಲ್ಸರ್) ಬರುವುದನ್ನು ಕಂಡು ಪಂಚರ ಸಮಕ್ಷಮದಲ್ಲಿ ನಿಲ್ಲಿಸಿ ನೋಡಲಾಗಿ ಅದರ ಸಂಖ್ಯೆ:ಕೆಎ-22-ಎಸ್-7272 ಇತ್ತು. ಸದರಿ ವಾಹನವನ್ನು ತಪಾಸಿಸಿ ನೋಡಲಾಗಿ ಒಂದು ಕೈ ಚೀಲದಲ್ಲಿ ಒಂದು ರಟ್ಟಿನ ಪೆಟ್ಟಿಗೆ ಕಂಡು ಬಂದಿತು ಹಾಗೂ ಅದರಲ್ಲಿ 180 ಎಂ.ಎಲ್.ದ 48 ಓಲ್ಡ್ ಟಾವರಿನ್ ಮದ್ಯದ ಬಾಟಲಿಗಳು ಕಂಡು ಬಂದವು. ಸದರಿ ವಾಹನ ಚಾಲಕನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ನಿತಿನ ಲಕ್ಷ್ಮಣ ಪಾಟೀಲ, ಮ.ನಂ.ಜೆ-323, ಇಂಡಾಲ ಕಾಲನಿ, ಬೆಳಗಾಂವ ಎಂದು

ಹೇಳಿದನು. ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಅಥವಾ ದಾಖಲಾತಿಗಳು ಇವೆಯೋ ಎಂದು ಕೇಳಲಾಗಿ ಅವನು ಇಲ್ಲ ಎಂದು ಹೇಳಿದನು. ಆತನು ಸರ್ಕಾರಕ್ಕೆ ಕರಕೊಡದ ಮದ್ಯದ ಬಾಟಲಿಗಳನ್ನು ಸದರಿ ವಾಹನದಲ್ಲಿ ಅಕ್ರಮ ಸಾಗಾಟ ಮಾಡುತ್ತಿದ್ದುದು ಖಚಿತವಾಗಿದ್ದರಿಂದ ಮೇಲಿನ ಬಾಟಲುಗಳಲ್ಲಿ 27 ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಸೀಲು ಮಾಡಿ ತಮ್ಮ ಹಾಗೂ ಪಂಚರ ಸಹಿ ಚೀಟಿಗಳನ್ನು ಅಂಟಿಸಿದರು. ಹಾಗೂ ಆರೋಪಿಯನ್ನು ದಸ್ತಗಿರಿ ಮಾಡಿ ವಾಹನ ಮತ್ತು ಮದ್ಯದ ಬಾಟಲುಗಳನ್ನು ಪಂಚರ ಸಮಕ್ಷಮ ಜಪ್ತಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಈ ಬಗ್ಗೆ ಸ್ಥಳದಲ್ಲಿ ಸಾಯಂಕಾಲ 3:30 ಗಂಟೆಯಿಂದ 4:30 ಗಂಟೆಯವರೆಗೆ ಪಂಚನಾಮೆ ತಯಾರಿಸಿದ್ದಾರೆ. ನಂತರ ಆರೋಪಿ ಹಾಗೂ ಜಪ್ತಿಯಾದ ಮುದ್ದೆ ಮಾಲುಗಳೊಂದಿಗೆ ಅಬಕಾರಿ ಕಛೇರಿಗೆ ಬಂದು ಸರ್ಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ವಾಹನ ಚಾಲಕನ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14(2), 38(ಎ) ಹಾಗೂ 34ರ ಪ್ರಕಾರ ಫಿರ್ಯಾದನ್ನು ಸಲ್ಲಿಸಿ ಗುನ್ನೆ ನಂ.20/2001-02 ದಿನಾಂಕ:11.04.2002ನ್ನು ದಾಖಲಿಸಿರುತ್ತಾರೆ. ಮುದ್ದೆಮಾಲುಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ವಾಹನ ಮಾಲೀಕರ ಹೆಸರು ಹಾಗೂ ವಿಳಾಸಗಳನ್ನು ತಿಳಿಸುವಂತೆ ದಿನಾಂಕ:18.04.2002ರ ಪತ್ರದಲ್ಲಿ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂವ ಇವರನ್ನು ವಿನಂತಿಸಲಾಗಿ, ಸದರಿಯವರು ತಮ್ಮ ಪತ್ರ ದಿನಾಂಕ:27.05.2002ರಲ್ಲಿ ಸದರಿ ವಾಹನದ ಮಾಲಿಕರ ಹೆಸರು ಶ್ರೀಮತಿ ಶಕುಂತಲಾ ಶ್ರೀಪಾದ ಸುರ್ವೆ, ಮ.ನಂ.1628, ಅನ್ಸುರಕರ ಗಲ್ಲಿ, ಬೆಳಗಾಂವ ಎಂದು ತಿಳಿಸಿದ್ದಾರೆ.

ಸದರಿ ಆರೋಪಿತರು ತಮ್ಮ ವಕೀಲರಾದ ಶ್ರೀ ಆಯ್.ಎಂ. ಕೋತವಾಲ ಇವರ ಮುಖಾಂತರ ದಿನಾಂಕ:15.04.2002ರಂದು ವಕಾಲತನಾಮಾ ನೀಡಿರುತ್ತಾರೆ. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ರೀತ್ಯ ವಾಹನವನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳಿ ದಿನಾಂಕ:18.04.2002ರ ನೋಟೀಸನ್ನು ವಾಹನ ಮಾಲಿಕರಿಗೆ ಈ ಪ್ರಾಧಿಕಾರದಿಂದ ನೀಡಲಾಗಿತ್ತು. ನಂತರ ಸದರಿಯವರು ದಿನಾಂಕ:23.04.2002ರಂದು ಕಾರಣ ಕೇಳಿ ನೋಟೀಸಿಗೆ ಉತ್ತರ ಸಲ್ಲಿಸಿ ಸದರಿ ಕಾರಣ ಕೇಳಿ ನೀಡಿದ ನೋಟೀಸಿನಲ್ಲಿರುವ ಅಂಶಗಳನ್ನು ಅಲ್ಲಗಳೆದಿದ್ದಾರೆ ಹಾಗೂ ವಾಹನವನ್ನು ತಮ್ಮ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿಕೊಂಡಿದ್ದಾರೆ. ಈ ಕುರಿತು ಎ.ಡಿ.ಪಿ. ಬೆಳಗಾಂವ ಇವರ ಅಭಿಪ್ರಾಯವನ್ನು ಕೇಳಲಾಗಿ ಪ್ರಭಾರ ಎ.ಡಿ.ಪಿ. ಯವರು ಈ ಪ್ರಾಧಿಕಾರಕ್ಕೆ ದಿನಾಂಕ:15.04.2002ರಂದು ತಮ್ಮ ತಕರಾರನ್ನು ಸಲ್ಲಿಸಿದ್ದಾರೆ.

ಆದರೆ ಆರೋಪಿತರು ಮೇಲೆ ನಮೂದಿಸಿದ ತಮ್ಮ ಅರ್ಜಿಗಳಲ್ಲಿ ವಿನಂತಿಸಿಕೊಂಡಂತೆ ಅಂದರೆ ಸದರಿ ವಾಹನವು ಕಛೇರಿಯ ತೆರೆದ ಸ್ಥಳದಲ್ಲಿ ಇರುವುದರಿಂದ ಅದರ ಬಿಡಿಭಾಗಗಳು ಹಾಳಾಗುವ ಸಂಭವ ಇರುವುದರಿಂದ ಹಾಗೂ ಸದರಿ ವಾಹನವು ಸದರಿಯವರ ದಿನನಿತ್ಯದ ಉಪಯೋಗಕ್ಕೆ ಬೇಕಾಗಿರುವುದರಿಂದ ಅದನ್ನು ಬಿಡುಗಡೆಗೊಳಿಸಲು ವಿನಂತಿಸಿಕೊಂಡಿದ್ದರಿಂದ. ಅದೇ ರೀತಿಯಾಗಿ ಸದರಿ ವಾಹನವು ಹಾಳಾದಲ್ಲಿ ಅದನ್ನು ಮುಟ್ಟುಗೋಲು ಹಾಕಿಕೊಂಡ ಸಂದರ್ಭದಲ್ಲಿ ಅದಕ್ಕೆ ಉತ್ತಮ ಬೆಲೆ ಸಿಗಲಾರದು ಎಂದು ಅಭಿಪ್ರಾಯಪಟ್ಟು ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಕೆಲವೊಂದು ಶರತ್ತುಗಳಿಗೆ ಒಳಪಟ್ಟು ಸದರಿ ವಾಹನವನ್ನು ಈ ಕಛೇರಿಯ ಆದೇಶ ನಂ. ಇಎಕ್ಸ್/ಡಿಟಿಸಿಆರ್/498/ 2001-02 ದಿನಾಂಕ:27.05.2002ರ ಅನ್ವಯ ವಾಹನ ಮಾಲಿಕರ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಆದೇಶಿಸಲಾಯಿತು. ಸದರಿ ಶರತ್ತುಗಳ ಅನ್ವಯ ಆರೋಪಿತರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂವ ಜಿಲ್ಲೆ ಇವರು ತಮ್ಮ ಪತ್ರ ದಿನಾಂಕ:22.05.2002ರ ಅನ್ವಯ ನಿರ್ಧರಿಸಿದ ವಾಹನದ ಅಂದಾಜು ಬೆಲೆ ರೂ. 36,000/- ಗಳಿಗೆ ಯುನೈಟೆಡ್ ವೆಸ್ಟರ್ನ್ ಬ್ಯಾಂಕ್ ಲಿ, ಬೆಳಗಾಂವ ಇವರು ನೀಡಿರುವ ಬ್ಯಾಂಕ್ ಗ್ಯಾರಂಟಿ ನಂ.2002/5 ದಿನಾಂಕ:29.05.2002 ಹಾಗೂ ಅದೇ ಮೌಲ್ಯಕ್ಕೆ ಒಂದು ಜಾಮೀನು ಪತ್ರ ಹಾಗೂ ಇಂಡೆಮ್ನಿಟಿ ಬಾಂಡ್‌ನ್ನು ಸಲ್ಲಿಸಿ ಸದರಿ ವಾಹನವನ್ನು ದಿನಾಂಕ:30.05.2002 ರಂದು ತಮ್ಮ ಮಧ್ಯಂತರ ವಶಕ್ಕೆ ಪಡೆದುಕೊಂಡಿದ್ದಾರೆ.

ರಸಾಯನ ತಜ್ಞರು, ಬೆಂಗಳೂರು ಇವರು ತಮ್ಮ ವರದಿ ದಿನಾಂಕ:12.06.2002ರಲ್ಲಿ ಸದರಿ ಜಪ್ತಿಯಾದ ಮದ್ಯದಲ್ಲಿ ಮದ್ಯಸಾರದ ಅಂಶ ಇರುವುದಾಗಿಯೂ ಹಾಗೂ ಅದು ಮಾನವ ಸೇವನೆಗೆ ಯೋಗ್ಯವಾಗಿರುವುದಾಗಿಯೂ ವರದಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರವಾಗಿ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಪಂಚರ ಹೇಳಿಕೆಯನ್ನು ಪಡೆಯಲಾಗಿದೆ. ಹಾಗೂ 5 ದಾಖಲೆಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಲಾಗಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತೆ ಇರುತ್ತವೆ.

1. ದಿನಾಂಕ:11.04.2002ರಂದು ದ್ವಿಚಕ್ರ ವಾಹನ (ಬಜಾಜ್ ಪಲ್ಸರ್) ಸಂ.ಕೆಎ-22-ಎನ್-7272 ದಲ್ಲಿ ಅಕ್ರಮವಾಗಿ ಮದ್ಯವನ್ನು ಅಕ್ರಮ ಸಾಗಾಟ ಮಾಡಲಾಗಿದೆಯೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲಿಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಿಯಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೆಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ರಾದ ಶ್ರೀ ಹೆಚ್.ಎಂ. ನಾಯಕ, ನಿವೃತ್ತ ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ ಇವರು ದಿನಾಂಕ:10.07.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ:12.10.1998 ರಿಂದ 31.10.2002ರ ವರೆಗೆ ಸದರಿಯವರು ಬೆಳಗಾವಿಯ ಇ.ಐ.ಬಿ. ಯಲ್ಲಿ ಸಬ್‌ಇನ್‌ಸ್ಪೆಕ್ಟರ್‌ರಾಗಿ ಕಾರ್ಯ ನಿರ್ವಹಿಸಿದ್ದಾಗಿ ಹೇಳಿದ್ದಾರೆ.

ದಿನಾಂಕ: 11.04.2002 ರಂದು ಸಿಬ್ಬಂದಿ ಹಾಗೂ ಪಂಚರೊಂದಿಗೆ ಬೆಳಗಾವಿಯ ನೆಹರು ಕ್ರೀಡಾಂಗಣದ ಎಡಬದಿಯಲ್ಲಿ ರಸ್ತೆ ಕಾವಲು ನಡೆಸುತ್ತಿದ್ದಾಗ ಮಧ್ಯಾಹ್ನ 3:30 ಗಂಟೆಗೆ ಒಂದು ದ್ವಿಚಕ್ರ ವಾಹನ (ಬಜಾಜ್ ಪಲ್ಸರ್) ಬರುತ್ತಿದ್ದನ್ನು ನೋಡಿ ನಿಲ್ಲಿಸಿ ಅದರ ತಪಾಸಣೆಯನ್ನು ಮಾಡಿದಾಗ ಒಂದು ಕೈ ಚೀಲದಲ್ಲಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್ ದ 48 ಬಾಟಲಿಗಳು ಓಲ್ಡ್ ಟಾವರಿನ್ ಮದ್ಯ ಇದ್ದದ್ದು ಕಂಡು ಬಂದುದಾಗಿಯೂ ವಾಹನ ಚಾಲಕನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರು ನಿತಿನ ಲಕ್ಷ್ಮಣ ಪಾಟೀಲ, ಸಾ: ಇಂಡಾಲ, ಬೆಳಗಾಂವ ಎಂದು ಹೇಳಿದನು. ಸದರಿ ಮದ್ಯವನ್ನು ಸಾಗಾಟ ಮಾಡಲು ಪರ್ಮಿಟ್ ಅಥವಾ ದಾಖಲಾತಿಗಳು ಇವೆಯೋ ಎಂದು ಕೇಳಲಾಗಿ ಇಲ್ಲ ಎಂದು ಹೇಳಿದ್ದಾಗಿ ತಿಳಿಸಿದ್ದಾರೆ. ನಂತರ ಪಂಚರ ಸಮಕ್ಷಮದಲ್ಲಿ ಸದರಿ ದ್ವಿಚಕ್ರ ವಾಹನ ಬಜಾಜ್ ಪಲ್ಸರ್ ನಂ. ಕೆಎ-22-ಎಸ್-7272 ಮತ್ತು ಮದ್ಯವನ್ನು ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ಸದರಿ ಮದ್ಯದ ಬಾಟಲುಗಳಲ್ಲಿ 27 ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಅರಿವೆ ಸುತ್ತಿ ಸೀಲು ಮಾಡಿ ಅದರ ಮೇಲೆ ಸದರಿಯವರ ಹಾಗೂ ಪಂಚರ ಸಹಿ ಇರುವ ಚೀಟಿಗಳನ್ನು ಅಂಟಿಸಿದ್ದಾಗಿ ತಿಳಿಸಿದ್ದಾರೆ. ನಂತರ ವಾಹನ ಮಾಲಿಕರ ಹೆಸರನ್ನು ಕೇಳಲಾಗಿ ಅವನು ಗೊತ್ತಿಲ್ಲ ಎಂದು ತಿಳಿಸಿದ್ದಾಗಿಯೂ ನಂತರ ಅವನನ್ನು ಬಂಧಿಸಿದ್ದಾಗಿ ತಿಳಿಸಿದ್ದಾರೆ. ನಂತರ ಈ ಬಗ್ಗೆ ಮಧ್ಯಾಹ್ನ 3:40 ರಿಂದ 4:30ರ ವರೆಗೆ ಪಂಚನಾಮೆ ತಯಾರಿಸಿದ್ದಾಗಿ ತಿಳಿಸಿದ್ದಾರೆ. ನಂತರ ಕಛೇರಿಗೆ ಬಂದು ಸರ್ಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ಅಬಕಾರಿ ಗುನ್ನೆ ನಂ.20/01-02ರಲ್ಲಿ ಫಿರ್ಯಾದು ದಾಖಲು ಮಾಡಿದ್ದಾಗಿ ತಿಳಿಸಿದ್ದಾರೆ. ಆರೋಪಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾಗಿ ತಿಳಿಸಿದ್ದಾರೆ. ಮತ್ತು ಜಪ್ತಿಯಾದ ವಸ್ತುಗಳ ಬಗ್ಗೆ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಫಿರ್ಯಾದನ್ನು ಪ್ರಥಮ ವರ್ತಮಾನ ವರದಿಯೊಂದಿಗೆ ನ್ಯಾಯಾಲಯಕ್ಕೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ನಂತರ ಪ್ರಕರಣವನ್ನು ಮುಂದಿನ ತನಿಖೆಗಾಗಿ ಶ್ರೀ ಕೋಟಗಾರ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಬೆಳಗಾಂವ ಇವರಿಗೆ ವಹಿಸಿಕೊಟ್ಟಿದ್ದಾಗಿ ತಿಳಿಸಿದ್ದಾರೆ. ವಾಹನವನ್ನು ನೋಡಿದರೆ ಗುರುತಿಸುವುದಾಗಿ ತಿಳಿಸಿದ್ದಾರೆ. ಪಂಚನಾಮೆಯ ದೃಢೀಕೃತ ಪ್ರತಿಯನ್ನು ನಿಪಿ-1 ಎಂತಲೂ ಅದರ ಮೇಲಿನ ಸದರಿಯವರ ಸಹಿಯನ್ನು ನಿಪಿ-1(ಎ) ಎಂತಲೂ ಗುರುತಿಸಲಾಗಿದೆ. ಫಿರ್ಯಾದಿನ ದೃಢೀಕೃತ ಕಾರ್ಬನ್ ಪ್ರತಿಯನ್ನು ನಿಪಿ-2 ಎಂತಲೂ ಅದರ ಮೇಲಿನ ಸದರಿಯವರ ಸಹಿಯನ್ನು ನಿಪಿ-2(ಎ) ಎಂತಲೂ ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯ ದೃಢೀಕೃತ ಕಾರ್ಬನ್ ಪ್ರತಿಯನ್ನು ನಿಪಿ-3 ಎಂತಲೂ ಅದರ ಮೇಲಿನ ಅವರ ಸಹಿಯನ್ನು ನಿಪಿ-3(ಎ) ಎಂತಲೂ ಗುರುತಿಸಲಾಗಿದೆ. ಅಧಿಕೃತ ಅಧಿಕಾರಿಯವರಿಗೆ ಒಪ್ಪಿಸಿದ ವರದಿಯನ್ನು ನಿಪಿ-4 ಎಂತಲೂ ಅದರ ಮೇಲಿನ ಅವರ ಸಹಿಯನ್ನು ನಿಪಿ-4(ಎ) ಎಂತಲೂ ಗುರುತಿಸಲಾಗಿದೆ.

ನಂತರ ವಾಹನ ಮಾಲಿಕರ ಪರ ವಕೀಲರ ಪಾಟೀಸವಾಲಿಗೆ ಉತ್ತರಿಸುತ್ತ ಸದರಿಯವರು ತಮಗೆ ಬಂದ ಬಾತ್ಮಿಯ ಬಗ್ಗೆ ಪೊಲೀಸ್ ಠಾಣೆಗೆ ತಿಳಿಸಿಲ್ಲ ಎಂದು ಹೇಳಿದ್ದಾರೆ. ಅಲ್ಲದೇ 48 ಬಾಟಲುಗಳ ಮದ್ಯವನ್ನು ಒಬ್ಬನೇ ಆರೋಪಿ ದ್ವಿಚಕ್ರ ಮೇಲೆ ಸಾಗಿಸುವುದು ಸಾಧ್ಯವಿದೆ ಎಂದು ಹೇಳಿದ್ದಾರೆ. ಸದರಿ ದಿನದಂದು ವಾಹನವನ್ನು ಮದ್ಯದ ಸಮೇತ ವಾಹನ ಚಾಲಕನನ್ನು ಗುನ್ನೆ ನಡೆದ ಸ್ಥಳದಲ್ಲಿ ಹಿಡಿದಿದ್ದಾಗಿ ತಿಳಿಸಿದ್ದಾರೆ. ಹಾಗೂ ಸದರಿ ಜಾಗೆಯಲ್ಲಿಯೇ ಪಂಚರ ಸಮಕ್ಷಮದಲ್ಲಿ ಪಂಚನಾಮೆ ಬರೆದಿದ್ದಾಗಿ ತಿಳಿಸಿದ್ದಾರೆ. ಜಪ್ತಿಯಾದ ವಾಹನಕ್ಕೆ ಕ್ಯಾರಿಯರ್ ಇದ್ದುದಾಗಿಯೂ ತಿಳಿಸಿ ತಾನು ಸುಳ್ಳು ಫಿರ್ಯಾದು ಮಾಡಿರುವುದಿಲ್ಲ ಎಂದು ತಿಳಿಸಿದ್ದಾರೆ. ಈ ಪಾಟೀ ಸವಾಲಿನಿಂದ ವಾಹನ ಮಾಲೀಕರು ಯಾವುದೇ ಪ್ರಯೋಜನಕಾರಿಯಾದ ಅಂಶಗಳನ್ನು ಸಿದ್ಧಪಡಿಸಲು ವಿಫಲರಾಗಿರುತ್ತಾರೆ.

ಶ್ರೀ ಜಿ.ಎಂ. ಕೋಟಗಾರ, ನಿವೃತ್ತ ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಇವರ ಹೇಳಿಕೆಯನ್ನು ಪ್ರಾ.ಸಾ-2 ಆಗಿ ಪಡೆಯಲಾಯಿತು. ದಿನಾಂಕ:10.07.2003ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ ದಿನಾಂಕ:22.06.1998ರಿಂದ 30.06.2003ರ ವರೆಗೆ ಸದರಿಯವರು ಬೆಳಗಾವಿಯ ಉತ್ತರ ಉಪ ವಲಯ ನಂ.-2ರಲ್ಲಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್‌ರಾಗಿ ಕಾರ್ಯನಿರ್ವಹಿಸಿದ್ದಾಗಿಯೂ ಸದರಿ ಗುನ್ನೆಗೆ ಸಂಬಂಧಿಸಿದ ಕಾಗದ ಪತ್ರಗಳನ್ನು (ವಾಹನ ಹೊರತು ಪಡಿಸಿ) ದಿನಾಂಕ:29.04.2002 ರಂದು ಶ್ರೀ ಹೆಚ್.ಎಂ. ನಾಯಕ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಇಐಬಿ, ಬೆಳಗಾಂವ ಇವರಿಂದ ಪಡೆದುಕೊಂಡಿದ್ದಾಗಿ ತಿಳಿಸಿದ್ದಾರೆ. ದಿನಾಂಕ:10.06.2002ರಂದು ಅಬಕಾರಿ ರಕ್ಷಕರಾದ ಶ್ರೀ ಜೆ.ಬಿ. ಡಿಸೋಜಾ ಇವರ ಮುಖಾಂತರ ಸ್ಯಾಂಪಲ್ ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ಕಳುಹಿಸಿದ್ದಾಗಿಯೂ ವಿಶ್ಲೇಷಣೆಯಾದ ಸ್ಯಾಂಪಲ್ ಬಾಟಲು ಮತ್ತು ವಿಶ್ಲೇಷಣಾ ವರದಿಯನ್ನು ಸದರಿ ಅಬಕಾರಿ ರಕ್ಷಕರಿಂದಲೇ ದಿನಾಂಕ:13.06.2002 ರಂದು ಪಡೆದಿದ್ದಾಗಿ ತಿಳಿಸಿದ್ದಾರೆ. ವಾಹನ ಚಾಲಕ ಹಾಗೂ ವಾಹನ ಮಾಲಿಕರ ವಿರುದ್ಧ ದಿನಾಂಕ:27.08.2002ರಂದು ನ್ಯಾಯಾಲಯದಲ್ಲಿ ದೋಷಾರೋಪಣೆ ಪತ್ರ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ವಾಹನದ ಮಾಲಿಕರು ತಮ್ಮ ಲಾಭಕ್ಕಾಗಿ ಜಪ್ತಿಯಾದ ವಾಹನದಲ್ಲಿ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಿರುವುದು ತನಿಖೆಯಿಂದ ಖಚಿತವಾಗಿರುವುದರಿಂದ ಸದರಿ ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾರೆ. ರಸಾಯನಿಕ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ನಿಪಿ-5 ಎಂತಲೂ ಅದರ ಮೇಲಿನ ಅವರ ಸಹಿಯನ್ನು ನಿಪಿ-5(ಎ) ಎಂತಲೂ ಗುರುತಿಸಲಾಗಿದೆ.

ನಂತರ ವಾಹನ ಮಾಲಿಕರ ಪರ ವಕೀಲರ ಪಾಟೀಸವಾಲಿಗೆ ಉತ್ತರಿಸುತ್ತ ಸದರಿಯವರು ಸದರಿ ಪ್ರಕರಣಕ್ಕೆ ಸಂಬಂಧಿಸಿದ ಮದ್ಯದ ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗೆ ಕಳುಹಿಸಿದ್ದಾಗಿಯೂ ಹಾಗೂ ಆರ್.ಸಿ. ಪುಸ್ತಕದ ಆಧಾರದ ಮೇಲೆ ವಾಹನ ಮಾಲಿಕರ ವಿರುದ್ಧ ಸುಳ್ಳು ಕೇಸು ಹಾಕಿಲ್ಲವೆಂದು ತಿಳಿಸಿದ್ದಾರೆ. ಅದರಂತೆಯೇ ಜಪ್ತಿಯಾದ ಮದ್ಯಕ್ಕೂ ಹಾಗೂ ವಾಹನ ಮಾಲಿಕರಿಗೆ ಸಂಬಂಧವಿದೆ ಎಂದು ಹೇಳಿದ್ದಾರೆ. ಈ ಪಾಟೀ ಸವಾಲಿನಿಂದ ವಾಹನ ಮಾಲಿಕರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬಂದಿರುವುದಿಲ್ಲ.

ಶ್ರೀ ಅಸಲಮ್ ಗೌಸ್ ಮೊಹಿದ್ದೀನ್ ಸನದಿ ಇವರು ಪಂಚ ಸಾಕ್ಷಿದಾರರಿದ್ದು ಇವರ ಹೇಳಿಕೆಯನ್ನು ಪ್ರಾ.ಸಾ-3 ರಂತೆ ಪಡೆಯಲಾಯಿತು. ಸದರಿಯವರು ದಿನಾಂಕ:21.08.2003ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ:11.04.2002ರಂದು ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ಇಐಬಿ, ಬೆಳಗಾಂವ ಇವರು ಸಿಬ್ಬಂದಿಯೊಂದಿಗೆ ಬೆಳಗಾವಿಯಿಂದ ಕಾಕತಿಗೆ ಹೋಗುವ ರಸ್ತೆಯಲ್ಲಿ ನೆಹರು ಕ್ರೀಡಾಂಗಣದ ಎಡಬದಿಯಲ್ಲಿ ರಸ್ತೆಗಾವಲು ಮಾಡುತ್ತಿದ್ದಾಗ ಒಂದು ದ್ವಿಚಕ್ರ

ವಾಹನ (ಬಜಾಜ್ ಪಲ್ಸರ್) ನಂ.ಕೆಎ-22-ಎಸ್-7272 ಬಂದಿದ್ದನ್ನು ತಡೆದು ತಪಾಸಿಸಿದಾಗ 180 ಎಂ.ಎಲ್.ದ 48 ಬಾಟಲುಗಳು ಓಲ್ಡ್ ಟಾವರಿನ್ ವ್ಹಿಸ್ಕಿ ಮದ್ಯ ಯಾವುದೇ ರಹದಾರಿ ಪತ್ರವಿಲ್ಲದೇ ಸಾಗಾಟ ಮಾಡುತ್ತಿದ್ದಾಗ ಸಿಕ್ಕಿಬಿದ್ದ ಅಪರಾಧಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತಿಮಾಡಿ ಪಂಚನಾಮೆ ಬರೆದ ನಂತರ ಅದರ ಮೇಲೆ ಸಹಿ ಮಾಡಿದ್ದಾಗಿ ತಿಳಿಸಿದ್ದಾರೆ. ಪಂಚನಾಮೆಯನ್ನು ಸಾಯಂಕಾಲ 3:30 ರಿಂದ 4:30 ರ ವರೆಗೆ ಬರೆಯಲಾಯಿತು ಹಾಗೂ ಅದನ್ನು ಓದಿ ತಿಳಿಸಿದ ನಂತರ ಅದರ ಮೇಲೆ ರುಜು ಮಾಡಿದ್ದಾಗಿ ತಿಳಿಸಿದ್ದಾರೆ. ಪಂಚನಾಮೆಯ ಮೇಲೆ ಅವರ ಸಹಿಯನ್ನು ನಿಪಿ-1ಬಿ ಎಂದು ಗುರುತಿಸಲಾಗಿದೆ.

ನಂತರ ವಾಹನ ಮಾಲಿಕರ ಪರ ವಕೀಲರಾದ ಶ್ರೀ ಐ.ಎಂ. ಕೋತವಾಲ ಇವರ ಪಾಟೀಸವಾಲಿಗೆ ಉತ್ತರಿಸುತ್ತ ಸದರಿಯವರು ಅಬಕಾರಿ ಕಾಂಟ್ರಾಕ್ಟರ್ ಹತ್ತಿರ ಕೆಲಸ ಮಾಡುತ್ತಿರುವುದಾಗಿಯೂ ಅಬಕಾರಿ ಇಲಾಖೆಯವರು ಕರೆದಾಗ ಪಂಚರೆಂದು ಕೆಲಸ ಮಾಡುವುದಾಗಿ ತಿಳಿಸಿದ್ದಾರೆ. ತಪಾಸಣೆಯ ಕಾಲಕ್ಕೆ 48 ಬಾಟಲುಗಳು ಓಲ್ಡ್ ಟಾವರಿನ್ ವ್ಹಿಸ್ಕಿ ಮದ್ಯ ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ತಾನು ಪಂಚನಾಮೆಯ ಮೇಲೆ ಸ್ಥಳದಲ್ಲಿಯೇ ಸಹಿ ಮಾಡಿದ್ದಾಗಿಯೂ ಸದರಿ ಸಹಿಯನ್ನು ಕಛೇರಿಯಲ್ಲಿ ಮಾಡಿರುವುದಿಲ್ಲ ಎಂದು ತಿಳಿಸಿದ್ದಾರೆ. ಸದರಿಯವರಿಗೆ ಕನ್ನಡ ಬರುವುದಿಲ್ಲವೆಂತಲೂ ಪಂಚನಾಮೆಯನ್ನು ಓದಿ ತಿಳಿಸಿದ ನಂತರ ಸಹಿ ಮಾಡಿರುವುದಾಗಿ ತಿಳಿಸಿದ್ದಾರೆ. ಸದರಿಯವರು ಅಬಕಾರಿ ಇಲಾಖೆಯ ಕಾಯಂ ಪಂಚನಲ್ಲವೆಂದು ಹೇಳಿದ್ದಾರೆ. ಸದರಿ ಪ್ರಕರಣದಲ್ಲಿ ಪಂಚನಾಮೆಯನ್ನು ಬರೆದವರ ಹೆಸರುಗೊತ್ತಿಲ್ಲ ಎಂದು ಹೇಳಿದ್ದಾರೆ. ಸದರಿ ಮದ್ಯವನ್ನು ಅವರ ಸಮಕ್ಷಮದಲ್ಲಿಯೇ ಜಪ್ತಿ ಮಾಡಿರುವುದಾಗಿ ತಿಳಿಸಿದ್ದಾರೆ. ಸದರಿಯವರು ಅಬಕಾರಿ ಗುತ್ತಿಗೆದಾರರ ಕೈ ಕೆಳಗೆ ಕೆಲಸ ಮಾಡುತ್ತಿದ್ದರೂ ಇಲಾಖೆಗೆ ಸಹಾಯ ಮಾಡಲು ಸುಳ್ಳು ಹೇಳುತ್ತಿಲ್ಲ ಎಂದು ತಿಳಿಸಿದ್ದಾರೆ. ಸದರಿ ದಿನದಂದು ಬಜಾಜ್ ಪಲ್ಸರ್ ವಾಹನ ಹಾಗೂ ಅದರ ಮೇಲೆ ಮದ್ಯದ ಬಾಟಲಿಗಳು ತಪಾಸಣೆ ಕಾಲಕ್ಕೆ ಸಿಕ್ಕಿದ್ದು ನಿಜ ಎಂದು ಹೇಳಿದ್ದಾರೆ. ಈ ಪಾಟೀ ಸವಾಲಿನಿಂದ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬಂದಿರುವುದಿಲ್ಲ. ಪ್ರಾ.ಸಾ-1, ಪ್ರಾ.ಸಾ-2 ಮತ್ತು ಪ್ರಾ.ಸಾ-3 ಇವರ ಹೇಳಿಕೆಯ ಮೇಲೆ ದಿನಾಂಕ:11.04.2002ರಂದು ಬಜಾಜ್ ಪಲ್ಸರ್‌ದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ನಿಜವೆಂದು ಕಂಡುಬರುತ್ತದೆ. ಆದ್ದರಿಂದ ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಶ್ರೀಮತಿ ಶಕುಂತಲಾ ಶ್ರೀಪಾದ ಸುರ್ವೆ, ಅನ್ಸೂರಕರ ಗಲ್ಲಿ, ಬೆಳಗಾಂವ ಇವರು ವಾಹನ ಮಾಲಿಕರಿದ್ದು ಇವರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ಆಗಿ ಪಡೆಯಲಾಗಿದೆ. ಸದರಿಯವರು ದಿನಾಂಕ:16.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಸದರಿಯವರು ಜಪ್ತಿಯಾದ ವಾಹನ ಬಜಾಜ್ ಪಲ್ಸರ್ ನಂ.ಕೆಎ-22-ಎಸ್-7272 ರ ಮಾಲಿಕರಿರುವುದಾಗಿ ತಿಳಿಸಿದ್ದಾರೆ. ಸದರಿ ವಾಹನವನ್ನು ಮದ್ಯ ಸಾಗಾಟ ಮಾಡಲು ಯಾರಿಗೂ ಕೊಟ್ಟಿರುವುದಿಲ್ಲ ಎಂದು ಹೇಳಿದ್ದಾರೆ. ಈ ಪ್ರಕರಣದ ಆರೋಪಿ ನಿತಿನ ಲಕ್ಷ್ಮಣ ಪಾಟೀಲ ಈತನಿಗೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂತಲೂ ಹಾಗೂ ಜಪ್ತಿಯಾದ ಮದ್ಯಕ್ಕೆ ಹಾಗೂ ಸದರಿಯವರಿಗೆ ಯಾವುದೇ ತರಹದ ಸಂಬಂಧ ಇರುವುದಿಲ್ಲವೆಂತಲೂ ತಿಳಿಸಿದ್ದಾರೆ. ಸದರಿ ವಾಹನವನ್ನು ಅವರು ಹಾಗೂ ಅವರ ಮಗ ಉಪಯೋಗಿಸುತ್ತಿರುವುದಾಗಿಯೂ ನಂತರ ವಾಹನ ಜಪ್ತಿಯಾಗಿರುವ ವಿಷಯ ಅವರು ಊರಿನಿಂದ ಹಿಂದಿರುಗಿದಾಗ ಗೊತ್ತಾಗಿರುವುದಾಗಿ ತಿಳಿಸಿದ್ದಾರೆ. ತದನಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಜೊತೆಗೆ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಿ ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ಪಡೆದುಕೊಂಡಿದ್ದಾಗಿ ತಿಳಿಸಿದ್ದಾರೆ. ಹಾಗೂ ಸದ್ಯಕ್ಕೆ ವಾಹನವು ಸದರಿಯವರ ವಶದಲ್ಲಿರುವುದಾಗಿ ತಿಳಿಸಿದ್ದಾರೆ. ಈಗ ವಾಹನವನ್ನು ಸದರಿಯವರ ವಶಕ್ಕೆ ಕಾಯಂ ಆಗಿ ಬಿಟ್ಟುಕೊಡಲು ವಿನಂತಿಸಿಕೊಂಡಿದ್ದಾರೆ.

ನಂತರ ಎ.ಡಿ.ಪಿ. ಯವರ ಪಾಟೀಸವಾಲಿಗೆ ಉತ್ತರಿಸುತ್ತ ಸದರಿಯವರು ತಮಗೆ ವಾಹನ ಚಾಲನೆಯ ಲೈಸೆನ್ಸ್ ಇರುವುದಿಲ್ಲ ಎಂದು ತಿಳಿಸಿ ಸದರಿಯವರ ಮಗನಿಗೆ ಲೈಸೆನ್ಸ್ ಇರುವುದಾಗಿ ತಿಳಿಸಿದ್ದಾರೆ. ಆತನ ಹೆಸರು ಸಂತೋಷ ಪ್ರಕಾಶ ಪೆಡ್ನೆಕರ ಎಂದು ಇದ್ದು ಅವನು ಎಲೆಕ್ಟ್ರಿಕಲ್ ಕೆಲಸ ಮಾಡುತ್ತಿರುವುದಾಗಿ ತಿಳಿಸಿದ್ದಾರೆ. ಆರೋಪಿ ನಿತಿನ ಸದರಿಯವರ ಮಗನ ಗೆಳೆಯ ಇರುವುದಿಲ್ಲವೆಂತಲೂ ಸದರಿ ವಾಹನವು ನಿತಿನ ಲಕ್ಷ್ಮಣ ಪಾಟೀಲ ಈತನ ಕಡೆಗೆ ಹೇಗೆ ಹೋಯಿತು ಎಂಬುದು ಸದರಿಯವರಿಗೆ ಗೊತ್ತಿರುವುದಿಲ್ಲ ಎಂದು ತಿಳಿಸಿದ್ದಾರೆ. ವಾಹನವು ಸದರಿಯವರು ಊರಿನಿಂದ ಬರುವುದರೊಳಗಾಗಿ ಕಾಣೆಯಾಗಿದ್ದು, ಅದರ ಬಗ್ಗೆ ಪೊಲೀಸರಿಗೆ ಫಿರ್ಯಾದಿ ಕೊಟ್ಟಿಲ್ಲ ಎಂದು ತಿಳಿಸಿದ್ದಾರೆ. ಸದರಿ ಆರೋಪಿಯು ಸದರಿ ವಾಹನದಲ್ಲಿ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಸಿಕ್ಕಿಬಿದ್ದ ವಿಷಯ ಗೊತ್ತಿಲ್ಲವೆಂದು ಹೇಳಿದ್ದಾರೆ. ಅವರ ತಿಳುವಳಿಕೆಯ ಪ್ರಕಾರ ಜಪ್ತಿಯಾದ ವಾಹನದಲ್ಲಿ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಲಾಗಿಲ್ಲ ಎಂದು ತಿಳಿಸಿದ್ದಾರೆ. ಅದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ವಿನಂತಿಸಿದ್ದಾರೆ. ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ಸಿದ್ಧಪಡಿಸುವಲ್ಲಿ ವಾಹನ ಮಾಲಿಕರು ವಿಫಲರಾಗಿದ್ದಾರೆ. ಸದರಿ ವಾಹನವು ಕಾಣೆಯಾದರೂ ಆ ಬಗ್ಗೆ ಪೊಲೀಸ್ ಇಲಾಖೆಗೆ ಫಿರ್ಯಾದು ನೀಡಿರುವುದಿಲ್ಲವಾದ್ದರಿಂದ ಸದರಿ ಅಕ್ರಮ ಸಾಗಾಟವು ವಾಹನ ಮಾಲಿಕರ ತಿಳುವಳಿಕೆಯಲ್ಲಿಯೇ ನಡೆದಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಆದ್ದರಿಂದ ಎರಡನೆಯ ಪ್ರಶ್ನೆಗೆ ಉತ್ತರ ಇಲ್ಲವೆಂದು ಪರಿಗಣಿಸಲಾಗಿದೆ. ಈ ಮೇಲೆ ನಮೂದಿಸಿದಂತೆ ಸದರಿ ವಾಹನದಲ್ಲಿ ಮದ್ಯದ ಅಕ್ರಮ ಸಾಗಾಟ ನಡೆದಿರುವುದು ಪ್ರಾಧಿಕಾರಕ್ಕೆ ಮನವರಿಕೆ ಆಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ.ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಇ.ಐ.ಬಿ., ಬೆಳಗಾಂವ ಇವರು ದಾಖಲು ಮಾಡಿದ ಗುನ್ನೆ ನಂ. 20/2001-02 ದಿನಾಂಕ:11.04.2002 ನೇದ್ದರಲ್ಲಿ ಜಪ್ತಿಯಾದ

ವಾಹನ ನಂ.ಕೆಎ-22-ಎಸ್-7272 (ಬಜಾಜ್ ಪಲ್ಸರ್) ಹಾಗೂ ಸ್ಯಾಂಪಲ್ ಬಾಟಲುಗಳನ್ನು ಹೊರತುಪಡಿಸಿ ಉಳಿದ 3.780 ಲೀಟರ್ ಮದ್ಯವನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ದಿನಾಂಕ:31.12.2003 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:

ಪ್ರಾ.ಸಾ.1 - ಶ್ರೀ ಹೆಚ್.ಎಂ. ನಾಯಕ, ನಿವೃತ್ತ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಇ.ಐ.ಬಿ. ಬೆಳಗಾಂವ - ಫಿರ್ಯಾದಿ.
ಪ್ರಾ.ಸಾ.2 - ಶ್ರೀ ಜಿ.ಎಂ. ಕೋಟಗಾರ, ನಿವೃತ್ತ ಅಬಕಾರಿ ಸಬ್ ಇನ್ಸ್‌ಪೆಕ್ಟರ್- ತನಿಖಾಧಿಕಾರಿ
ಪ್ರಾ.ಸಾ.3 - ಶ್ರೀ ಅಸಲಮ್ ಗೌಸಮೋಹಿದ್ದೀನ ಸನದಿ, ಬೆಳಗಾಂವ- ಪಂಚ

**ಅನುಬಂಧ-2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:

ನಿಶಾನೆ ಪಿ-1 - ಪಂಚನಾಮೆಯ ದೃಢೀಕೃತ ಪ್ರತಿ.
ನಿಶಾನೆ ಪಿ-1(ಎ) - ಅದರ ಮೇಲಿನ ಫಿರ್ಯಾದಿಯವರ ಸಹಿ.
ನಿಶಾನೆ ಪಿ-1(ಬಿ) - ಪಂಚನಾಮೆಯ ಮೇಲಿನ ಪಂಚರ ಸಹಿ.
ನಿಶಾನೆ ಪಿ-2 - ಫಿರ್ಯಾದಿನ ದೃಢೀಕೃತ ಕಾರ್ಬನ್ ಪ್ರತಿ.
ನಿಶಾನೆ ಪಿ-2(ಎ) - ಅದರ ಮೇಲಿನ ಫಿರ್ಯಾದಿಯವರ ಸಹಿ.
ನಿಶಾನೆ ಪಿ-3 - ಪ್ರಥಮ ವರ್ತಮಾನ ವರದಿಯ ದೃಢೀಕೃತ ಪ್ರತಿ.
ನಿಶಾನೆ ಪಿ-3(ಎ) - ಅದರ ಮೇಲಿನ ಫಿರ್ಯಾದಿಯವರ ಸಹಿ.
ನಿಶಾನೆ ಪಿ-4 - ಜಪ್ತಿಯಾದ ವಸ್ತುಗಳನ್ನು ಜಪ್ತಿ ಮಾಡಿದ ಕುರಿತು ಅಧಿಕೃತ ಅಧಿಕಾರಿಗಳಿಗೆ ಬರೆದ ವರದಿ.
ನಿಶಾನೆ ಪಿ-4(ಎ) - ಅದರ ಮೇಲಿನ ಫಿರ್ಯಾದಿಯವರ ಸಹಿ.
ನಿಶಾನೆ ಪಿ-5 - ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿ.
ನಿಶಾನೆ ಪಿ-5(ಎ) - ಅದರ ಮೇಲಿನ ತನಿಖಾಧಿಕಾರಿಗಳ ಸಹಿ.

**ಅನುಬಂಧ-3**

ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು -ಇಲ್ಲಾ

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:

ಡಿ.ಡಬ್ಲ್ಯೂ-1 - ಶ್ರೀಮತಿ ಶಕುಂತಲಾ ಶ್ರೀಪಾದ ಸುರ್ವೆ- ವಾಹನ ಮಾಲಿಕರು.

**ಅನುಬಂಧ-5**

ವಾಹನ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು -ಇಲ್ಲಾ

**ಪಿ.ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಪಿ.ಆರ್.190 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಬೆಳಗಾಂವ ಜಿಲ್ಲೆ, ಬೆಳಗಾಂವ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯದ ಆದೇಶ

**ಆದೇಶ ಸಂಖ್ಯೆ:ಎ3.ಶ್ರೀಗಂಧ. ವಾಹನ. ಸಿಆರ್-1/2001-02/5593, ದಿನಾಂಕ:31ನೇ ಜನವರಿ, 2004**

**ವಿಷಯ:** ಶ್ರೀಗಂಧವನ್ನು ಅಕ್ರಮ ಸಾಗಾಣಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-04-ಇ-6223 ಮತ್ತು ಅಕ್ರಮವಾಗಿ ಸಾಗಿಸುತ್ತಿದ್ದ 20 ಕೆ.ಜಿ. ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳುವ ಕುರಿತು.

**ಉಲ್ಲೇಖ:** ಆರಕ್ಷಕ ಠಾಣೆ ನಿರೀಕ್ಷಕರು, ಅಬ್ಬಿನ ಹೊಳೆ ಪೊಲೀಸ್ ಠಾಣೆ, ಹಿರಿಯೂರು ತಾ: ಇವರ ಪತ್ರ ಸಂಖ್ಯೆ ಇಲ್ಲ ದಿನಾಂಕ:23.07.2001.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ ಅಬ್ಬಿನಹೊಳೆ ಪೊಲೀಸ್ ಠಾಣೆ ಗುನ್ನೆ ನಂ.34/2001ರಲ್ಲಿ ಶ್ರೀಗಂಧದ ಕಳ್ಳಸಾಗಾಣಿಕೆ ಮಾಡುತ್ತಿದ್ದಾಗ ಅಮಾನತ್ತು ಪಡಿಸಿಕೊಳ್ಳಲಾಗಿರುವ ವಾಹನ **ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:**

ಕೆಎ-04-ಇ-6223ನ್ನು ಹಾಗೂ ಸದರಿ ಅಮಾನತ್ತು ಪಡಿಸಿಕೊಳ್ಳಲಾಗಿರುವ 20 ಕೆ.ಜಿ. ಶ್ರೀಗಂಧವನ್ನು ಹಾಗೂ ಈ ಕೆಳಕಂಡ ದಾಖಲೆಗಳಾದ ಪ್ರಥಮ ಮಾಹಿತಿ ವರದಿ, ಪಂಚನಾಮೆ ಮತ್ತು ಅಮಾನತ್ತು ಪಡಿಸಿಕೊಂಡಿರುವ ಸ್ವತ್ತಿನ ಪಟ್ಟಿಗಳನ್ನು ಸಲ್ಲಿಸುತ್ತಾ ಮುಂದಿನ ಕ್ರಮ ತೆಗೆದುಕೊಳ್ಳುವ ಬಗ್ಗೆ ಕೋರಿರುತ್ತಾರೆ.

ಉಲ್ಲೇಖಿತ ಪತ್ರದೊಂದಿಗೆ ಲಗತ್ತಿಸಲಾಗಿರುವ ಪ್ರಥಮ ಮಾಹಿತಿ ವರದಿಯಂತೆ, ಅಬ್ಬಿನ ಹೊಳೆ ಪೊಲೀಸ್ ಠಾಣೆಯ ಸಹಾಯಕ ಉಪ ನಿರೀಕ್ಷಕರು ದಿನಾಂಕ:08.07.2001ರಂದು ಸಾಯಂಕಾಲ ಸುಮಾರು 6.00 ಗಂಟೆ ಸಮಯದಲ್ಲಿ ಸಿಬ್ಬಂದಿಯೊಂದಿಗೆ ಗ್ರಾಮಗಳ ಭೇಟಿಗಾಗಿ ಹೋಗುತ್ತಿರುವ ಸಂದರ್ಭದಲ್ಲಿ ಹಿರಿಯೂರು-ಧರ್ಮಪುರ ರಸ್ತೆಯಲ್ಲಿ ಈಶ್ವರಗೆರೆ ಕೆರೆ ಹಿಂಭಾಗದಲ್ಲಿ ಹೋಗುತ್ತಿರುವಾಗ ಹಿರಿಯೂರು ಕಡೆಯಿಂದ ಬರುತ್ತಿದ್ದ ಸ್ಕೂಟರ್‌ನಲ್ಲಿದ್ದ ಎರಡು ಮಂದಿ ಪೊಲೀಸರನ್ನು ಕಂಡು ಸ್ಕೂಟರನ್ನು ನಿಲ್ಲಿಸಿ ಓಡಿಹೋಗಿರುತ್ತಾರೆ ಹಾಗೂ ಹಿಡಿಯಲು ಪ್ರಯತ್ನಿಸಿದರೂ ಸಿಕ್ಕಿರುವುದಿಲ್ಲ. ಸದರಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ 20 ಕೆ.ಜಿ. ಶ್ರೀಗಂಧವು ಪತ್ತೆಯಾಗಿದ್ದರಿಂದ, ಸದರಿ ಸ್ಕೂಟರ್ ಮತ್ತು ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 86,87 R/W 379 ಐಪಿಸಿ ಪ್ರಕಾರ ಅಬ್ಬಿನಹೊಳೆ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ.34/2001ರನ್ವಯ ಮೊಕದ್ದಮೆ ದಾಖಲಿಸಿಕೊಂಡಿರುತ್ತಾರೆ.

ಈ ಪ್ರಾಧಿಕಾರವು ವಾಹನವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ಹಾಗೂ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಹಿರಿಯೂರು ಇವರ ವಶಕ್ಕೆ ನೀಡಿರುತ್ತಾರೆ.

ವಾಹನದ ಮಾಲಿಕರ ವಿವರಗಳನ್ನು ಈ ಪ್ರಾಧಿಕಾರವು ಪ್ರಾದೇಶಿಕ ಸಾರಿಗೆ ಅಧಿಕಾರಿ, ತುಮಕೂರು ರವರಿಂದ ಪಡೆಯಲಾದ ವಾಹನದ 'ಬಿ' ವಹಿಯ ಎಕ್ಸ್‌ಟ್ರ್ಯಾಕ್ಟ್ ಮೂಲಕ ತಿಳಿದುಕೊಂಡು, ವಾಹನದ ನೋಂದಾಯಿತ ಮಾಲಿಕರಾದ ಶ್ರೀ ಡಿ. ಸೀತಾರಾಂ ಭಟ್, ಬಿನ್ ಮಹದೇವ ಭಟ್, ಸಂಖ್ಯೆ:95/3 4ನೇ ಕ್ರಾಸ್, 2ನೇ ಮುಖ್ಯ ರಸ್ತೆ, ಗಂಗಾನಗರ, ಬೆಂಗಳೂರು ಇವರಿಗೆ ಸದರಿಯವರ ಹೆಸರಿನಲ್ಲಿ ನೊಂದಾಯಿತವಾಗಿರುವ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-04-ಇ-6223ನ್ನು ಶ್ರೀಗಂಧದ ಅಕ್ರಮ ಕಳ್ಳಸಾಗಾಣಿಕೆ ಸಂದರ್ಭದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಕಾರಣ ಸದರಿ ವಾಹನವನ್ನು ಸರ್ಕಾರದ ಪರವಾಗಿ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದ ಕಾರಣ ಕೇಳಿ ನೋಟೀಸ್ ಸಂಖ್ಯೆ: ಎ3, ಶ್ರೀಗಂಧ, ವಾಹನ, ಸಿಆರ್-1/2001-02 ದಿನಾಂಕ:23.06.2003ರನ್ವಯ ನೊಂದಾಯಿತ ಅಂಚೆಯ ಮೂಲಕ ರವಾನಿಸಲಾಗಿತ್ತು. ಸದರಿ ನೋಟೀಸ್ ದಿನಾಂಕ:24.06.2003ರಂದು ಅಂಚೆ ಇಲಾಖೆಯ 'No such person in this address not known, returned to sender' ಎಂಬ ಷರಾದೊಂದಿಗೆ ಹಿಂತಿರುಗಿ ಬಂದಿರುತ್ತದೆ.

ಅಮಾನತ್ತು ಪಡಿಸಿಕೊಂಡ ವಾಹನದ ಮಾಲಿಕರಿಗೆ ಈ ಪ್ರಾಧಿಕಾರದ ಮುಂದೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸುವಂತೆ 15 ದಿನಗಳ ಗಡುವನ್ನು ನೀಡಿ ಹೊರಡಿಸಲಾದ ನೋಟಿಸನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವಂತೆ ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರನ್ನು ದಿನಾಂಕ:03.11.2003ರಂದು ಪತ್ರ ಬರೆದು ಕೋರಿದ ಪ್ರಯುಕ್ತ, ಸದರಿ ನೋಟೀಸು ದಿನಾಂಕ:11.12.2003ರ ಕರ್ನಾಟಕ ರಾಜ್ಯ ಪತ್ರದ ಭಾಗ-3ರ ಪುಟ ಸಂಖ್ಯೆ-1815ರಲ್ಲಿ ಪ್ರಕಟಗೊಂಡಿರುತ್ತದೆ.

ಸದರಿ ನೋಟೀಸು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 15 ದಿನಗಳು ಗತಿಸಿದರೂ ಸಹ ವಾಹನದ ಮಾಲಿಕರು ಈ ಪ್ರಾಧಿಕಾರದ ಮುಂದೆ ಯಾವುದೇ ಅಹವಾಲು ಸಲ್ಲಿಸದಿರುವ ಕಾರಣ, ಅಮಾನತ್ತು ಪಡಿಸಿಕೊಂಡಿರುವ ವಾಹನವನ್ನು ಶ್ರೀಗಂಧದ ಕಳ್ಳಸಾಗಾಣಿಕೆಗೆ ಉದ್ದೇಶ ಪೂರ್ವಕವಾಗಿ ಬಳಸಿಕೊಳ್ಳಲಾಗಿದೆ ಎಂದು ಈ ಪ್ರಾಧಿಕಾರವು ಭಾವಿಸಿ, ಈ ಕೆಳಗಿನಂತೆ ಆದೇಶ ನೀಡಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳನ್ವಯ ಜಿ.ಎಸ್. ಕರಿಯಪ್ಪ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಪ್ರಸ್ತುತ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ-04-ಇ-6223 ಹಾಗೂ ಅದರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 20 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

| | | |
|---|---|---|
| 1. | ವಾಹನದ ಮಾದರಿ | - ಬಜಾಜ್ ಚೇತಕ್ ಸ್ಕೂಟರ್ (ಮಾಡಲ್ 1996) |
| 2. | ನೋಂದಣಿ ಸಂಖ್ಯೆ | - ಕೆಎ-04-ಇ-6223 |
| 3. | ಇಂಜಿನ್ ಸಂಖ್ಯೆ | - ಈ 06 ಬಿಹೆಚ್ -021539 |
| 4. | ಛಾಸಿ ಸಂಖ್ಯೆ | - ಸಿ 06 ಬಿಜೆ 021024 |
| 5. | ಶ್ರೀಗಂಧದ ಪ್ರಮಾಣ | - 20 ಕೆ.ಜಿ. |

ಮೇಲ್ಕಂಡ ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನ ಹಾಗೂ ಶ್ರೀಗಂಧವು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ದಿನಾಂಕ:31.01.2004ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಸಹಿ ಹಾಗೂ ಮೊಹರಿನಡಿ ನೀಡಲಾಗಿದೆ.

ಈ ಆದೇಶ ನೀಡಲಾದ ದಿನಾಂಕದಿಂದ 30 ದಿನಗಳಲ್ಲಿ ಯಾವುದೇ ಮೇಲ್ಮನವಿ ಸ್ವೀಕೃತವಾಗದಿದ್ದಲ್ಲಿ ಈ ಆದೇಶವೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.191

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯದ ಆದೇಶ

**ಆದೇಶ ಸಂಖ್ಯೆ:ಎ6(ಎ3) ಗಂಧ. ಗುನ್ನೆ-257/2001-02/5594, ದಿನಾಂಕ:31ನೇ ಜನವರಿ, 2004**

**ವಿಷಯ:** ಅಕ್ರಮವಾಗಿ ಶ್ರೀಗಂಧ ಕಳ್ಳಸಾಗಾಣಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ಅಂಬಾಸಿಡರ್ ಕಾರ್ ನಂ.ಕೆಎಲ್-11-131 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 203.50 ಕೆ.ಜಿ. ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ವೃತ್ತಾಧಿಕಾರಿಗಳು, ಚಿತ್ರದುರ್ಗ ನಗರ ವೃತ್ತ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸಿಪಿಐ. ಸಿಟಿಎ.ಟಾ-257/2001 ದಿನಾಂಕ:22.11.2001.
2. ವೃತ್ತಾಧಿಕಾರಿಗಳು, ಚಿತ್ರದುರ್ಗ ನಗರ ವೃತ್ತ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸಿಪಿಐ. ಸಿಟಿಎ. ಟಾ-257/2001 ದಿನಾಂಕ:31.01.2003.

**ಪ್ರಸ್ತಾವನೆ:**

ಚಿತ್ರದುರ್ಗ ನಗರ ವೃತ್ತದ ಪೊಲೀಸ್ ವೃತ್ತಾಧಿಕಾರಿ ದಿನಾಂಕ:28.10.2001ರಂದು **ಕೆಎಲ್-11-131ನೇ ನಂಬರಿನ ಅಂಬಾಸಿಡರ್ ಕಾರಿನಲ್ಲಿ** ಶ್ರೀಗಂಧ ಕಳ್ಳಸಾಗಾಣಿಕೆ ನಡೆಯುತ್ತಿದೆ ಎಂಬ ಖಚಿತ ವರ್ತಮಾನವನ್ನು ಆಧರಿಸಿ, ಸಿಬ್ಬಂದಿಯೊಂದಿಗೆ ಚಿತ್ರದುರ್ಗ ನಗರದ ಪಂಚಾಚಾರ್ಯ ಕಲ್ಯಾಣ ಮಂಟಪದಿಂದ ಸ್ವಲ್ಪ ದೂರದಲ್ಲಿ ಎನ್‌ಹೆಚ್-4 ರಸ್ತೆಯಲ್ಲಿ ಕಾದು ನಿಂತಿದ್ದಾಗ ಮಧ್ಯಾಹ್ನ 1.45 ಗಂಟೆ ಸಮಯದಲ್ಲಿ ಚಿತ್ರದುರ್ಗ ನಗರದಿಂದ ಚಳ್ಳಕೆರೆ ಸರ್ಕಲ್ ಕಡೆ ಬರುತ್ತಿದ್ದ ಕೆಎಲ್-11-131 ಅಂಬಾಸಿಡರ್ ಕಾರನ್ನು ನಿಲ್ಲಿಸಲು ಸೂಚಿಸಿದಾಗ ವಾಹನದ ಚಾಲಕನು ವಾಹನವನ್ನು ನಿಲ್ಲಿಸದೇ ಹಿಂದೆ ತಿರುಗಿ ವಾಪಾಸು ಹೋಗಲು ಪ್ರಯತ್ನಿಸಿದಾಗ, ಸಿಬ್ಬಂದಿ ಸಹಕಾರದಿಂದ ವಾಹನವನ್ನು ತಡೆದು ನಿಲ್ಲಿಸಿ ಕಾರಿನಲ್ಲಿದ್ದ ಡ್ರೈವರ್ ಸೇರಿ 4 ಜನರನ್ನು ಹಿಡಿದಿರುತ್ತಾರೆ. ಕಾರನ್ನು ಶೋಧಿಸಿದಾಗ ಕಾರಿನಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ರಾಜ್ಯ ಸರ್ಕಾರದ ಸ್ವತ್ತಾದ ಶ್ರೀಗಂಧವು ಕಂಡು ಬಂದಿದ್ದರಿಂದ, ಸದರಿ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಹಾಗೂ 203.50 ಕೆ.ಜಿ. ಶ್ರೀಗಂಧವನ್ನು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 71(ಎ) ಅಡಿಯಲ್ಲಿ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

ಸದರಿ ಪ್ರಕರಣವು ಚಿತ್ರದುರ್ಗ ನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ.257/2001 ಎಂದು ದಾಖಲಿಸಲ್ಪಟ್ಟಿದೆ. ಸದರಿ ವಾಹನ ಸಂಖ್ಯೆ ಕೆಎಲ್-11-131 ಮತ್ತು 203.50 ಕೆ.ಜಿ. ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರ ವಶದಲ್ಲಿರಿಸಿಕೊಳ್ಳಲು ಈ ಪ್ರಾಧಿಕಾರವು ಆದೇಶಿಸಿದೆ.

ಸದರಿ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ಮಾಹಿತಿ ವರದಿ, ಮಾಲು ಅಮಾನತ್ತು ಪಟ್ಟಿ, ಪಂಚನಾಮೆ ಹಾಗೂ ಮಾಲು ಪಟ್ಟಿ ಸಂಖ್ಯೆ: 180/2001 ದಿನಾಂಕ:28.10.2001ರ ನಕಲುಗಳನ್ನು ಉಲ್ಲೇಖ (2)ರ ಪತ್ರದ ಮೂಲಕ ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುತ್ತಾರೆ.

ಕಳ್ಳಸಾಗಾಣಿಕೆಯಲ್ಲಿ ಬಳಸಲಾದ ವಾಹನ ಅಂಬಾಸಿಡರ್ ಸಂಖ್ಯೆ: ಕೆಎಲ್-11-131ರ ಮಾಲಿಕರನ್ನು ಪತ್ತೆ ಹಚ್ಚುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಝಿಕೋಡ್, ಕೇರಳ ರಾಜ್ಯ ಇವರಿಗೆ ಪತ್ರ ಬರೆದು ವಾಹನದ 'ಬಿ' ವಹಿಯ ಎಕ್ಸ್‌ಟ್ರ್ಯಾಕ್ಟ್‌ನ್ನು ತರಿಸಿಕೊಂಡು ಪರಿಶೀಲಿಸಲಾಗಿ, ವಾಹನದ ನೊಂದಾಯಿತ ಮಾಲಿಕರು, ಶ್ರೀ ಅರಂಗಲ್ ಶ್ರೀಧರನ್, ಎಂ.ಪಿ. ರಾಜ್ಯ ಸಭಾ ಬಿನ್ ಶ್ರೀಗೋಪಾಲನ್, ಅರಂಗಲ್ ಹೌಸ್, ಕ್ಯಾಲಿಕಟ್ ಇವರು ಎಂದು ತಿಳಿದು ಬಂದ ಕಾರಣ, ಸದರಿಯವರಿಗೆ ಈ ಪ್ರಾಧಿಕಾರದಿಂದ ವಾಹನ ಸಂಖ್ಯೆ:ಕೆಎಲ್-11-131 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 203.50 ಕೆ.ಜಿ. ಶ್ರೀಗಂಧವನ್ನು ಏಕೆ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಸೂಕ್ತ ದಾಖಲೆಗಳೊಂದಿಗೆ ಅಹವಾಲು ಸಲ್ಲಿಸುವಂತೆ 15 ದಿನಗಳ ಕಾಲಾವಕಾಶ ನೀಡಿ ಕಾರಣ ಕೇಳಿ ನೋಟೀಸ್‌ಗಳನ್ನು ದಿನಾಂಕ:30.06.2003 ಮತ್ತು 15.10.2003 ರಂದು ನೀಡಲಾಗಿದೆ ಹಾಗೂ ಅಹವಾಲು ಸಲ್ಲಿಸಲು ವಿಫಲರಾದಲ್ಲಿ ಪ್ರಕರಣವನ್ನು ನಿಮ್ಮ ಗೈರುಹಾಜರಿಯಲ್ಲಿ ಏಕಪಕ್ಷೀಯವಾಗಿ ವಿಚಾರಣೆ ನಡೆಸುವುದಾಗಿ ತಿಳಿಸಲಾಗಿದೆ.

ದಿನಾಂಕ:30.06.2003 ಮತ್ತು 15.10.2003ರಂದು ನೀಡಲಾದ ಕಾರಣ ಕೇಳಿ ಪ್ರತಿಗಳು ಅಂಚೆ ಇಲಾಖೆಯ 'Expired returned to the sender ' ಎಂಬ ಷರಾದೊಂದಿಗೆ ವಾಪಾಸು ಬಂದಿರುತ್ತದೆ.

ವಾಹನದ ಇನ್ನಿತರ ವಾರಸುದಾರರು ಇದ್ದ ಪಕ್ಷದಲ್ಲಿ ಈ ಪ್ರಾಧಿಕಾರದ ಮುಂದೆ ತಮ್ಮ ಅಹವಾಲುಗಳನ್ನು 15 ದಿನಗಳ ಒಳಗೆ ಈ ಪ್ರಾಧಿಕಾರದ ಮುಂದೆ ಸಲ್ಲಿಸಲು ಅನುವಾಗುವಂತೆ ದಿನಾಂಕ:03.11.2003 ರಂದು ಈ ಪ್ರಾಧಿಕಾರದಿಂದ ಕಳುಹಿಸಲಾದ ಪ್ರಕಟಣೆಯಂತೆ ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ಇವರನ್ನು ಕೋರಲಾಗಿ, ಸದರಿ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದ ಭಾಗ-3ರ ಪುಟ ಸಂಖ್ಯೆ:1815ರಲ್ಲಿ ಪ್ರಕಟವಾಗಿರುತ್ತದೆ.

ಸದರಿ ಪ್ರಕಟಣೆಯಲ್ಲಿ ನೀಡಲಾದ 15 ದಿನಗಳ ನಿಗದಿತ ಗಡುವು ಮುಕ್ತಾಯವಾದರೂ ಸಹಾ ಯಾವುದೇ ವ್ಯಕ್ತಿಯು ಯಾವುದೇ ಅಹವಾಲುಗಳನ್ನು ಈ ಪ್ರಾಧಿಕಾರದ ಮುಂದೆ ಸಲ್ಲಿಸದಿರುವ ಕಾರಣ ಈ ಪ್ರಾಧಿಕಾರವು ಏಕ ಪಕ್ಷೀಯವಾಗಿ ವಿಚಾರಣೆ ನಡೆಸಿ ಶ್ರೀಗಂಧ ಅಕ್ರಮ ಸಾಗಾಣಿಕೆ ಖಚಿತವಾಗಿದ್ದು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹಾಗೂ ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 71(ಎ) (2)ರ ಮೇರೆಗೆ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ವಯ ಜಿ.ಎಸ್. ಕರಿಯಪ್ಪ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ 71(ಎ)(2) ಕಲಂ

ರನ್ವಯ ಪ್ರಸ್ತುತ ಪ್ರಕರಣದಲ್ಲಿ ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಅಂಬಾಸಿಡರ್ ಸಂಖ್ಯೆ:ಕೆಎಲ್-11-131 ನ್ನು ಮತ್ತು 203.50 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ ಮತ್ತು ಈ ವಾಹನ ಹಾಗೂ ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ. ಈ ಆದೇಶವನ್ನು ದಿನಾಂಕ:31.01.2004 ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಹೆಸರು ಮತ್ತು ಮೊಹರಿನಡಿ ಹೊರಡಿಸಲಾಗಿದೆ.

| | | |
|---|---|---|
| 1. | ವಾಹನದ ಮಾದರಿ | - ಅಂಬಾಸಿಡರ್ ಕಾರ್ |
| 2. | ನೋಂದಣಿ ಸಂಖ್ಯೆ | - ಕೆಎಲ್-11-131 |
| 3. | ಇಂಜಿನ್ ಸಂಖ್ಯೆ | - 6 ಇಹೆಚ್ -062920 |
| 4. | ಛಾಸಿ ಸಂಖ್ಯೆ | - 111-591684 |
| 5. | ಶ್ರೀಗಂಧದ ಪ್ರಮಾಣ | - 203.50 ಕೆ.ಜಿ. |

ಈ ಆದೇಶ ಹೊರಡಿಸಿದ 30 ದಿನಗಳ ಒಳಗೆ ಯಾರೂ ಮೇಲ್ಮನವಿ ಸಲ್ಲಿಸದಿದ್ದಲ್ಲಿ, ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.192

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯದ ಆದೇಶ

**ಆದೇಶ ಸಂಖ್ಯೆ:ಎ6-ಶ್ರೀಗಂಧ-ಪ್ರಕರಣ-12/2002-03/ 5595, ದಿನಾಂಕ:31ನೇ ಜನವರಿ, 2004**

**ವಿಷಯ:** ಅಕ್ರಮವಾಗಿ ಶ್ರೀಗಂಧ ಕಳ್ಳಸಾಗಾಣಿಕೆ ಮಾಡುತ್ತಿದ್ದ ಮಾರುತಿ ಕಾರ್ ಸಂಖ್ಯೆ:ಕೆಎ-02-ಎಂ-6357 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 155 ಕೆ.ಜಿ. ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಉಪನಿರೀಕ್ಷಕರು, ಐಮಂಗಳ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ಪತ್ರ ಸಂಖ್ಯೆ:ಇಲ್ಲ ದಿನಾಂಕ:06.06.2002.

**ಪ್ರಸ್ತಾವನೆ:**

ಚಿತ್ರದುರ್ಗ ವಿಭಾಗದ ವ್ಯಾಪ್ತಿಯಲ್ಲಿ ಗುಯಿಲಾಳು ಕಡೆಯಿಂದ ಐಮಂಗಳ ಕಡೆಗೆ ಸುಮಾರು 1 ಕಿ.ಮೀ. ದೂರದಲ್ಲಿ ಎನ್‌ಹೆಚ್-4 ರಸ್ತೆಯಲ್ಲಿ ಬರುತ್ತಿದ್ದ ಲಾರಿ ಸಂಖ್ಯೆ:**ಕೆಎ-04-9495ನೇ** ಸಂಖ್ಯೆಯ ಲಾರಿಗೆ ದಿನಾಂಕ:10.02.2002ರಂದು ಮಧ್ಯಾಹ್ನ 2.30ರ ಸಮಯದಲ್ಲಿ **ಮಾರುತಿ ಕಾರು ಸಂಖ್ಯೆ:ಕೆಎ-02-ಎಂ-6357** ವಾಹನವು ಡಿಕ್ಕಿ ಹೊಡೆದ ಕಾರಣ, ಲಾರಿಯ ಚಾಲಕರು ನೀಡಿದ ದೂರಿನನ್ವಯ ದೂರು ದಾಖಲಿಸಿಕೊಂಡ ಐಮಂಗಳ ಪೊಲೀಸ್ ಠಾಣೆಯ ಉಪನಿರೀಕ್ಷಕರು ಸ್ಥಳ ತನಿಖೆ ನಡೆಸಲು ಅಪಘಾತ ಸ್ಥಳಕ್ಕೆ ಬಂದು ಕೆಎ-02-ಎಂ-6357 ರಿಜಿಸ್ಟ್ರೇಶನ್ ಮಾರುತಿ ಕಾರನ್ನು ತಪಾಸಣೆ ಮಾಡಿದ ಸಂದರ್ಭದಲ್ಲಿ ಸದರಿ ವಾಹನದಲ್ಲಿ ಯಾವುದೇ ಅಧಿಕೃತ ಪರವಾನಿಗೆ ಇಲ್ಲದೇ ಅಕ್ರಮವಾಗಿ ಸಾಗಿಸಲಾಗುತ್ತಿದ್ದ 155 ಕೆ.ಜಿ. ಶ್ರೀಗಂಧವನ್ನು ಪತ್ತೆ ಹಚ್ಚಿರುತ್ತಾರೆ ಹಾಗೂ ಮಾರುತಿ ಕಾರು ಮತ್ತು ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ-1963ರ 86 ಮತ್ತು 87 ಕಲಂಗಳು ರೂಲ್-379 ಐಪಿಸಿ ಪ್ರಕಾರ ಗುನ್ನೆ ನಂ.12/2002ರಲ್ಲಿ ಪ್ರಕರಣ ದಾಖಲು ಮಾಡಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆಯ ಕಲಂ 71(ಎ) ರನ್ವಯ ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮ ಜರುಗಿಸುವ ಬಗ್ಗೆ ಕೋರಿ ಅಮಾನತ್ತು ಪಡಿಸಿಕೊಳ್ಳಲಾದ ಮಾರುತಿ ಕಾರಿನ ಸಂಖ್ಯೆ:ಕೆಎ-02-ಎಂ-6357 ಮತ್ತು 155 ಕೆ.ಜಿ. ಶ್ರೀಗಂಧವನ್ನು ಉಲ್ಲೇಖಿತ ಪತ್ರದನ್ವಯ ಒಪ್ಪಿಸಿರುತ್ತಾರೆ.

ಸದರಿ ಪತ್ರದೊಂದಿಗೆ ಪ್ರಥಮ ಮಾಹಿತಿ ವರದಿ, ಪಂಚನಾಮೆ, ಹೇಳಿಕೆ ಹಾಗೂ ಆರೋಪಿಗಳು ಸ್ವಇಚ್ಛೆಯಿಂದ ನೀಡಿರುವ ಹೇಳಿಕೆಗಳ ಪ್ರತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರವು ಅಮಾನತ್ತು ಪಡಿಸಿಕೊಂಡಿರುವ 155 ಕೆ.ಜಿ. ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಹಿರಿಯೂರು ವಲಯ, ಹಿರಿಯೂರು ಇವರ ವಶಕ್ಕೂ ಹಾಗೂ ವಾಹನವನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರ ವಶಕ್ಕೆ ನೀಡಿರುತ್ತದೆ.

ವಾಹನದ ಮಾಲಿಕರ ವಿವರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು (ಪಶ್ಚಿಮ) ರಾಜಾಜಿನಗರ, ಬೆಂಗಳೂರು ಇವರಿಂದ ಪಡೆಯಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, (ಪಶ್ಚಿಮ) ರಾಜಾಜಿನಗರ, ಬೆಂಗಳೂರು ಇವರು ನೀಡಿರುವ 'ಬಿ' ವಹಿಯ ಎಕ್ಸ್‌ಟ್ರಾಕ್ಟ್ ಪ್ರಕಾರ ವಾಹನವು ಮ್ಯಾನೇಜಿಂಗ್ ಡೈರೆಕ್ಟರ್, ಡ್ಯಾಫೋಡಿಲ್ ಡಿಸೈನರ್ಸ್, ಡೆವಲಪರ್ಸ್ ಪ್ರೈವೇಟ್ ಲಿಮಿಟೆಡ್, 4143/ಡಿ. 8ನೇ 'ಎ' ಕ್ರಾಸ್, ಸುಬ್ರಹ್ಮಣ್ಯನಗರ, ಬೆಂಗಳೂರು ಇವರ ಹೆಸರಿನಲ್ಲಿ ನೊಂದಾಯಿತವಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು (ಪಶ್ಚಿಮ), ರಾಜಾಜಿನಗರ ಇವರು ನೀಡಿರುವ 'ಬಿ' ವಹಿಯ ಎಕ್ಸ್‌ಟ್ರಾಕ್ಟ್‌ನಲ್ಲಿರುವ ವಾಹನ ಇಂಜಿನ್ ಸಂಖ್ಯೆ ಮತ್ತು ಛಾಸಿ ಸಂಖ್ಯೆ ಹಾಗೂ ಪೊಲೀಸ್ ಉಪನಿರೀಕ್ಷಕರು, ಐಮಂಗಳ ಇವರು ಸಲ್ಲಿಸಿರುವ ಮಾಲು ಅಮಾನತ್ತು ಪಂಚನಾಮೆಯಲ್ಲಿ ನಮೂದಿಸಲಾಗಿರುವ ಇಂಜಿನ್ ಸಂಖ್ಯೆ ಮತ್ತು ಛಾಸಿ ಸಂಖ್ಯೆಗಳು ಪರಸ್ಪರ ಹೊಂದಾಣಿಕೆಯಾಗುತ್ತಿಲ್ಲ.

ಏತನ್ಮಧ್ಯೆ, ಡ್ಯಾಫೋಡಿಲ್ ಡಿಸೈನರ್ಸ್ ಅಂಡ್ ಡೆವಲಪರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ರವರು ಈ ಪ್ರಾಧಿಕಾರಕ್ಕೆ ದಿನಾಂಕ:29.03.2003ರಂದು ಪತ್ರವನ್ನು ಬರೆದು ಕೆಎ-20-ಎಂ-6357 ರಿಜಿಸ್ಟ್ರೇಷನ್ ಸಂಖ್ಯೆಯ ವಾಹನವು ಸದರಿ ಕಂಪನಿಯ ಸುಪರ್ದಿನಲ್ಲಿರುವುದಾಗಿಯೂ ಹಾಗೂ ವಾಹನದ ಇಂಜಿನ್ ಸಂಖ್ಯೆ:1065022 ಮತ್ತು ಛಾಸಿ ಸಂಖ್ಯೆ:99254 ಎಂಬುದಾಗಿ ತಿಳಿಸುತ್ತಾ,

ವಾಹನವನ್ನು ಸಂಸ್ಥೆಯು ಸ್ವಂತ ಉಪಯೋಗಕ್ಕಾಗಿ ಮಾತ್ರವೇ ಉಪಯೋಗಿಸಲಾಗುತ್ತಿದೆ ಎಂದು ತಿಳಿಸಿರುತ್ತಾರೆ ಹಾಗೂ ಸದರಿ ಪತ್ರದೊಂದಿಗೆ ವಾಹನದ ಆರ್.ಸಿ. ಪುಸ್ತಕದ ಪ್ರತಿಯನ್ನು ಸಲ್ಲಿಸಿರುತ್ತಾರೆ.

ಇದರಿಂದ ಅಮಾನತ್ತು ಪಡಿಸಿಕೊಳ್ಳಲಾದ ಮಾರುತಿ ಕಾರಿಗೆ ಸುಳ್ಳು ನಂಬರ್ ಪ್ಲೇಟ್ ಹಾಕಿಕೊಂಡು ಶ್ರೀಗಂಧದ ಅಕ್ರಮ ಸಾಗಾಣಿಕೆಗೆ ಬಳಸಲಾಗುತ್ತಿದೆ ಎಂದು ತಿಳಿದು ಬರುತ್ತದೆ.

ಸದರಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನದ ಮಾಲೀಕರು ಯಾರೆಂಬುದಾಗಿ ದೃಢಪಡದ ಕಾರಣ ಈ ಪ್ರಾಧಿಕಾರವು ದಿನಾಂಕ:03.11.2003ರಂದು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರಿಗೆ ಪತ್ರ ಬರೆದು ವಾಹನದ ವಿವರಗಳನ್ನು ನೀಡಿ ವಾಹನಕ್ಕೆ ಸಂಬಂಧಪಟ್ಟವರು ಯಾರಾದರೂ ಇದ್ದಲ್ಲಿ 15 ದಿನಗಳ ಒಳಗೆ ಈ ಪ್ರಾಧಿಕಾರದ ಮುಂದೆ ಅಹವಾಲು ಸಲ್ಲಿಸುವಂತೆ ತಿಳಿಸುವ ನೋಟೀಸನ್ನು ಪ್ರಕಟಿಸುವಂತೆ ಕೋರಿದೆ.

ಸದರಿ ಪ್ರಕಟಣೆಯು ದಿನಾಂಕ:11.12.2003ರ ಕರ್ನಾಟಕ ರಾಜ್ಯಪತ್ರದ ಭಾಗ-3ರ ಪುಟ ಸಂಖ್ಯೆ:1815ರಲ್ಲಿ ಪ್ರಕಟಿತಗೊಂಡಿರುತ್ತದೆ.

ನಿಗದಿತ 15 ದಿನಗಳು ಗತಿಸಿದರೂ ಸಹಾ ಯಾವುದೇ ವ್ಯಕ್ತಿಯು ಯಾವುದೇ ರೀತಿಯ ಅಹವಾಲನ್ನು ಸಲ್ಲಿಸಿರುವುದಿಲ್ಲವಾದ್ದ ಕಾರಣ, ಅಮಾನತ್ತು ಪಡಿಸಿಕೊಂಡಿರುವ ವಾಹನವನ್ನು ಉದ್ದೇಶ ಪೂರ್ವಕವಾಗಿ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಲಾಗಿದೆ ಎಂದು ದೃಢಪಡುವ ಕಾರಣ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಜಿ.ಎಸ್. ಕರಿಯಪ್ಪ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ಅಮಾನತ್ತು ಪಡಿಸಿಕೊಂಡಿರುವ ಮಾರುತಿ ಕಾರು ಸಂಖ್ಯೆ: ಕೆಎ-02-ಎಂ-6357ನ್ನು ಹಾಗೂ ಸದರಿ ವಾಹನವನ್ನು ಅಕ್ರಮವಾಗಿ ಸಾಗಿಸುತ್ತಿದ್ದ 155 ಕೆ.ಜಿ. ಶ್ರೀಗಂಧವನ್ನು ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ-71(ಎ)(2) ರನ್ವಯ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಸದರಿ ವಾಹನ ಹಾಗೂ ಶ್ರೀಗಂಧವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

| | | |
|---|---|---|
| 1. | ವಾಹನದ ಮಾದರಿ | - ಮಾರುತಿ ಕಾರು |
| 2. | ನೋಂದಣಿ ಸಂಖ್ಯೆ | - ಕೆಎ-02-ಎಂ-6357 |
| 3. | ಇಂಜಿನ್ ಸಂಖ್ಯೆ | - ಎಫ್-8 ಬಿಐ ಎನ್-204171 |
| 4. | ಛಾಸಿ ಸಂಖ್ಯೆ | - ಎಸ್‌ಬಿ-308-ಐಎನ್-153215 |
| 5. | ಶ್ರೀಗಂಧದ ಪ್ರಮಾಣ | - 155 ಕೆ.ಜಿ. |

ಈ ಆದೇಶ ಹೊರಡಿಸಿದ 30 ದಿನಗಳ ಒಳಗಾಗಿ ಯಾರೂ ಮೇಲ್ಮನವಿ ಸಲ್ಲಿಸದೇ ಇದ್ದ ಪಕ್ಷದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್.193

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ
## ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು-1
## ಪ್ರಕಟಣೆ

**ಸಂಖ್ಯೆ:ಸಪುಮ:209:2003-04, ಬೆಂಗಳೂರು, ದಿನಾಂಕ:23ನೇ ಫೆಬ್ರವರಿ, 2004**

2003-04ನೇ ಸಾಲಿನ ವಾರ್ಷಿಕ ದಾಸ್ತಾನು ತನಿಖೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆಯ ಮಾರಾಟ ವಿಭಾಗವನ್ನು ದಿನಾಂಕ:01.04.2004 ರಿಂದ 24.04.2004ರ ವರೆಗೆ (ಎರಡು ದಿನಗಳು ಸೇರಿ) ಮುಚ್ಚಲಾಗಿರುತ್ತದೆ ಎಂದು ಸಾರ್ವಜನಿಕರ ಅವಗಾಹನೆಗೆ ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗಂಗಯ್ಯ**
ನಿರ್ದೇಶಕರು.

## OFFICE OF THE DIRECTOR OF PRINTING, STATIONERY AND PUBLICATIONS
## NOTIFICATION

**No. CBD/209/2003-04, Bangalore, Dated:23rd February, 2004**

It is hereby notified for the information of the General public that the Government Central Book Depot, Bangalore will be remain closed from 01.04.2004 to 24.04.2004 (Both days inclusive) on account of Annual Stock verification for the year 2003-04.

**H. GANGAIAH**
DIRECTOR.

PR-250

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜ್‌ಭವನ್ ರಸ್ತೆ, ಪಿ.ಬಿ. ನಂ.5309**

**ಅಧಿಸೂಚನೆ**

**ಸಂಖ್ಯೆ:ಕೃಮಾಇ:09:ಚುನಾವ:2002, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ 1966ರ ಪ್ರಕರಣ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಈ ಕೆಳಕಂಡ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರುಗಳ ಹೆಸರು |
|---|---|---|
| 1. | ಚಾಮರಾಜನಗರ | ಶ್ರೀ ಪಿ.ಎಸ್. ವಿರೇಂದ್ರ ಪ್ರಸಾದ್,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕೊಳ್ಳೇಗಾಲ. |

**ಸೈಯದ್ ಜಮೀರ್ ಪಾಷ**
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ, ಬೆಂಗಳೂರು.

ಪಿ.ಆರ್.251

**ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇವರ ಕಛೇರಿ, ನಂ.14-3ಎ, ನೃಪತುಂಗ ರಸ್ತೆ, ಬೆಂಗಳೂರು-560 001 ಇವರ ನಡವಳಿಗಳು**

**ಸಂಖ್ಯೆ:ಕೈಜಇ:ಜಂ.ರಿ.ಟಿ. 1: ಸಮಾಪನೆ:29:1995-96, ದಿನಾಂಕ:12ನೇ ಫೆಬ್ರವರಿ, 2004**

**ವಿಷಯ:** ಸಮಾಪನೆಯಲ್ಲಿರುವ ಶ್ರೀ ಜಯಲಕ್ಷ್ಮಿ ಕಾಟನ್ ಪವರ್ ಲೂಂ ವೀವರ್ಸ್ ಕೋ ಆಪರೇಟಿವ್ ಸೊಸೈಟಿ ಲಿ, ಹಳೇಪಾಳ್ಯ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**
1. ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಹಾಗೂ ಪದನಿಮಿತ್ತ ಅಪರ ನಿಬಂಧಕರು, ಕೈಗಾರಿಕಾ ಸಹಕಾರ ಸಂಘಗಳು, ಬೆಂಗಳೂರು ಇವರ ಸಮಾಪನಾ ಆದೇಶ ಸಂ. ಐಸಿಎಸ್-2:ಎ2ಎಲ್‌ಕ್ಯೂಡಿ:12:85-86 ದಿನಾಂಕ:06.10.1987 ಮತ್ತು 11.10.1988.
2. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ ಇವರ ಪತ್ರ ಸಂ.ಡಿಆರ್‌ಟಿ.ಎಲ್‌ಕ್ಯೂಡಿ:231: 86-87 ದಿನಾಂಕ:08.11.2002, 22.11.2003 ಮತ್ತು 19.12.2003.

**ಪ್ರಸ್ತಾವನೆ:**

ಶ್ರೀ ಜಯಲಕ್ಷ್ಮಿ ಕಾಟನ್ ಪವರ್‌ಲೂಂ ವೀವರ್ಸ್ ಕೋ ಆಪರೇಟಿವ್ ಸೊಸೈಟಿ ಲಿ, ಹಳೇಪಾಳ್ಯ, ತಿಪಟೂರು, ತಾಲ್ಲೂಕು, ತುಮಕೂರು ಜಿಲ್ಲೆ ಇದರ ಕಾರ್ಯವ್ಯಾಪ್ತಿಯು ತಿಪಟೂರು ತಾಲ್ಲೂಕಿಗೆ ಇದ್ದು ನೋಂದಣಿ ಸಂಖ್ಯೆ:ಜೆಡಿಆರ್:24:600 ದಿನಾಂಕ:21.03.1961ರ ಪ್ರಕಾರ ನೋಂದಣಿಯಾಗಿರುತ್ತದೆ. ಇದರ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದರಿಂದ ಉಲ್ಲೇಖ (1)ರ ದಿನಾಂಕ:06.10.1987ರ ಮೇರೆಗೆ ಸಹಕಾರ ಸಂಘಗಳ ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಹಾಗೂ ಪದನಿಮಿತ್ತ ಅಪರ ನಿಬಂಧಕರು, ಕೈಗಾರಿಕಾ ಸಹಕಾರ ಸಂಘಗಳು, ಬೆಂಗಳೂರು ಇವರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ)ನ ಮೇರೆಗೆ ಸಂಘವನ್ನು ಸಮಾಪನೆಗೊಳಿಸಿ ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ಲಿ, ತುಮಕೂರು ಶಾಖೆಯ ನಿರ್ವಾಹಕರನ್ನು ಸಮಾಪಕರನ್ನಾಗಿ ನೇಮಕ ಮಾಡಲಾಗಿತ್ತು. ಅನಂತರ ಸದರಿ ಆದೇಶವನ್ನು ಮಾರ್ಪಡಿಸಿ ದಿನಾಂಕ:11.10.1988ರಂದು ಸಹಕಾರ ವಿಸ್ತರಣಾಧಿಕಾರಿ, ತಿಪಟೂರು ಇವರನ್ನು ಸಮಾಪಕರನ್ನಾಗಿ ನೇಮಕ ಮಾಡಿರುತ್ತಾರೆ. ದಿನಾಂಕ:31.03.2001ಕ್ಕೆ ಇದ್ದಂತೆ ಆಸ್ತಿ ಜವಾಬ್ದಾರಿಗಳಲ್ಲಿ ರೂ.2,48,602.62 ಆಸ್ತಿಯನ್ನು ನಿವೇಶನದಿಂದ ರೂ.1,10,000.00 ಹೊರತುಪಡಿಸಿ ಬೇರೆ ಆಸ್ತಿ ಬಾಬುಗಳನ್ನು ವಸೂಲಿ ಮಾಡಲು ರಹ ಇಲ್ಲದಿರುವುದರಿಂದ ಈ ಮೊತ್ತವನ್ನು ನಷ್ಟಕ್ಕೆ ವರ್ಗಾಯಿಸಿ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ದಿನಾಂಕ:28.10.2002ರಂದು ಸಮಾಪನಾ ನಡವಳಿಕೆಗಳನ್ನು ಪೂರ್ಣಗೊಳಿಸಿರುತ್ತಾರೆ. ಸಮಾಪಕರ ಸಮಾಪನಾ ನಡವಳಿಕೆಗಳನ್ನು ವಿವರವಾಗಿ ಪರಿಶೀಲಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಇವರು ಶಿಫಾರಸ್ಸಿನೊಂದಿಗೆ ಪ್ರಸ್ತಾವವನ್ನು ಸಲ್ಲಿಸಿರುತ್ತಾರೆ. ಇವರ ಪ್ರಸ್ತಾವವನ್ನು ಪರಿಗಣಿಸಿ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಬಹುದೆಂಬ ಅಭಿಪ್ರಾಯಕ್ಕೆ ಬಂದು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ. ರಾಮಿರೆಡ್ಡಿ, ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು-1 ಆದ ನಾನು ನೋಂದಣಿ ಸಂಖ್ಯೆ:ಜೆಡಿಆರ್:24:600 ದಿನಾಂಕ:21.03.1961ರಲ್ಲಿ ನೋಂದಣಿಯಾಗಿದ್ದ ಶ್ರೀ ಜಯಲಕ್ಷ್ಮಿ ಕಾಟನ್ ಪವರ್‌ಲೂಂ ವೀವರ್ಸ್ ಕೋ ಆಪರೇಟಿವ್ ಸೊಸೈಟಿ ಲಿ, ಹಳೇಪಾಳ್ಯ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ:12.02.2004ರಂದು ಹೊರಡಿಸಲಾಗಿದೆ.

**ಬಿ. ರಾಮಿರೆಡ್ಡಿ,**
ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ).

ಪಿ.ಆರ್.241